

ಗಿರಿರಾಯಾ ಗಿರಿರಾಯಾ
ಶರಣಾಗತರಿಗೆ ಕರುಣಾಕರ ವೆಂಕಟ

ಸ್ಮರಿಸುವೆ ನಿನ್ನನು ಸರಸಿಜಭವನುತ
ಸ್ಮರತಾಮರತರು ದುರಿತವಿದೂರ ೧

ಶ್ರೀಕರ ಭವಭಯಃ ನೂಕಿಸಿ ಎನ್ನನು
ಸಾಕೆಲೊ ಭೂಧರ ಸೂಕರ ರೂಪ ೨

ಆಪದ್ಬಾಂಧವ ಶ್ರೀಪತಿ ಎನ್ನನು
ಕಾಪಾಡೆಲೊ ಸಕಲಾಪದ್ಧರ ವೆಂಕಟ ೩

ಕಾಮಿತ ಫಲಪ್ರದ ಈ ಮಹೀತಳದೊಳು
ಸಾಮಜವರದ ಸುಧಾಮನ ಸಖ ಪೊರಿ ೪

ದಾತ ಗುರುಜಗನ್ನಾಥ ವಿಠಲ
ಪ್ರೀತನಾಗೋ ನಿನ್ನ ದೂತನು ನಾನೈ ೫

—ಗುರುಜಗನ್ನಾಥದಾಸರು

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

(15*–12–85 ರಿಂದ 13–1–86 ರ ವರೆಗೆ ಧನುರ್ಮಾಸದ ಪ್ರಯುಕ್ತ ಪುನರ್ವಿಮರ್ಶಿತವಾದದ್ದು)

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 2–00 ರಿಂದ 3–30 ತಿರುಪ್ಪಾವೈ (ಏಕಾಂತ)
ಶುದ್ಧಿ, ಧನುರ್ಮಾಸಕೈಂಕರ್ಯ, ಗಂಟೆ, ಬಲಿ, ಶಾತ್ತುಮೊರೆ.
,, 3–30 ರಿಂದ 3–45 ವರೆಗೆ ಶುದ್ಧಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ (ಏಕಾಂತ)
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 11–00 ವರೆಗೆ ಸರ್ವದರ್ಶನ
ಮಧ್ಯಾಹ್ನ 11–00 ರಿಂದ 12–00 ವರೆಗೆ ಶುದ್ಧಿ, ಎರಡನೇ ಅರ್ಚನೆ, (ಏಕಾಂತ)
,, 12–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದಿ
10–30 ಏಕಾಂತಸೇವೆ

(*15–12–85 ರ ಭಾನುವಾರ ಧನುರ್ಮಾಸ ಬೆಳಗ್ಗೆ 4–49 ಕ್ಕೆ ಆರಂಭ. ಆದರಿಂದಾಗಿ ಸುಪ್ರಭಾತ ನಡೆಯುವುದು. ಆಂದಿನ ಕಾರ್ಯಕ್ರಮ ಬೇರೆಯಾಗಿದೆ.)

### ಗುರುವಾರ, ತಿರುಪ್ಪಾವಡ

(19–12–85, 26–12–85, *9–1–86)

ಉದಯ 2–00 ರಿಂದ 3–30 ತಿರುಪ್ಪಾವೈ (ಏಕಾಂತ)
ಶುದ್ಧಿ, ಧನುರ್ಮಾಸಕೈಂಕರ್ಯ, ಗಂಟೆ, ಬಲಿ, ಶಾತ್ತುಮೊರೆ.
,, 3–30 ರಿಂದ 3–45 ವರೆಗೆ ಶುದ್ಧಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ

(*2–1–86 ರ ಗುರುವಾರದ ಕಾರ್ಯಕ್ರಮ ಪ್ರತ್ಯೇಕವಾಗಿ ತಿಳಿಸಲಾಗುವುದು)

### ಬುಧವಾರ, ಸಹಸ್ರ ಕಲಶಾಭಿಷೇಕ

(18–12–85, 25–12–85, *8–1–86)

ಉದಯ 2–00 ರಿಂದ 3–30 ವರೆಗೆ ತಿರುಪ್ಪಾವೈ (ಏಕಾಂತ)
ಶುದ್ಧಿ, ಧನುರ್ಮಾಸಕೈಂಕರ್ಯ, ಗಂಟೆ, ಬಲಿ, ಶಾತ್ತುಮೊರೆ.
,, 3–30 ರಿಂದ 3–45 ವರೆಗೆ ಶುದ್ಧಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ, 2ನೇ ಅರ್ಚನೆ.
,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ

(*1–1–86 ರ ಬುಧವಾರದ ಕಾರ್ಯಕ್ರಮ ಪ್ರತ್ಯೇಕವಾಗಿ ತಿಳಿಸಲಾಗುವುದು).

### ಶುಕ್ರವಾರ, ಅಭಿಷೇಕ

(20–12–85, 27–12–85, 3–1–86, 10–1–86)

ಉದಯ 2–00 ರಿಂದ 3–30 ವರೆಗೆ ತಿರುಪ್ಪಾವೈ (ಏಕಾಂತ)
ಶುದ್ಧಿ, ಧನುರ್ಮಾಸಕೈಂಕರ್ಯ, ಗಂಟೆ, ಬಲಿ, ಶಾತ್ತುಮೊರೆ.
,, 3–30 ರಿಂದ 5–00 ವರೆಗೆ ಸಳ್ಳಿಂಪು ಶುದ್ಧಿ, ಮತ್ತು ನಿತ್ಯಕೈಂಕರ್ಯಗಳು
,, 5–00 ರಿಂದ 6–30 ವರೆಗೆ ಅಭಿಷೇಕ (ಅರ್ಜಿತ)
,, 6–30 ರಿಂದ 8–00 ವರೆಗೆ ಸಮರ್ಪಣೆ
,, 8–00 ರಿಂದ 9–00 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–00 ರಿಂದ 9–30 ವರೆಗೆ ಗಂಟೆ ಬಲಿ, ಶಾತ್ತುಮೊರೆ
,, 9–30 ರಿಂದ ರಾತ್ರಿ 8–00 ವರೆಗೆ ಸರ್ವದರ್ಶನ
ರಾತ್ರಿ 8–00 ರಿಂದ 9–00 ವರೆಗೆ ಶುದ್ಧಿ ಇತ್ಯಾದಿ
,, 9–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

ಗಮನಿಕೆ :– ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಉಯ್ಯಾಲೆಸೇವೆ, ವಾಹನ ಸೇವೆಗಳು, ವಸಂತೋತ್ಸವ ಮಧ್ಯಾಹ್ನ 1–00 ರಿಂದ 6–00 ನಡುವೆಯೂ, ಶುಕ್ರವಾರಗಳಲ್ಲಿ 1–00 ರಿಂದ 8–00 ರ ವರೆಗೂ ಈ ಸೇವೆಗಳು ಹಾಗೂ ಸಹಸ್ರದೀಪಾಲಂಕಾರವೂ ಜರುಗುವುವು.



ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

ಸಂಪುಟ ೧೬]　　ಡಿಸೆಂಬರ್ ೧೯೮೫　　[ಸಂಚಿಕೆ ೭

# ವಿಷಯಸೂಚಿ



ಮುಖ ಚಿತ್ರ : ತಿರುಮಲೆಯಲ್ಲಿನ ಗೀತೋಪದೇಶ ಕೃತಿ.

ಹಿಂಬದಿಯಲ್ಲಿ : ಕಪಿಲತೀರ್ಥದಲ್ಲಿ ತೆಪ್ಪೋತ್ಸವ.

ಒಳಗಡೆಯಲ್ಲಿ : ನವರಾತ್ರಿ ಬ್ರಹ್ಮೋತ್ಸವದ ಉತ್ಸವ ಮೂರ್ತಿಯ ಅಲಂಕಾರಗಳು. ಕರ್ನೂಲಿನಲ್ಲಿ ತಿ. ತಿ. ದೇ. ಕಲ್ಯಾಣಮಂಟಪ ಉದ್ಘಾಟನೆ—ಆಂಧ್ರ ಪ್ರದೇಶ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರಿಂದ.

# ಸಂಪಾದಕೀಯ

ಮಹಾಭಾರತದ ಕಾಲಯಾವುದು? ಅದನ್ನು ಬರೆದವರು ಒಬ್ಬರೋ? ಅನೇಕರೋ? ಎಲ್ಲ ಪ್ರಶ್ನೆಗಳೂ ಸಾಕಷ್ಟು ವಿವಾದವನ್ನು ಮೂಡಿಸಿದ್ದುಂಟಾದರೂ, ಅದನ್ನು ಪಂಚಮ ವೇದ ಎಂದು ಭಾರತೀಯ ಪರಂಪರೆ ಗೌರವಿಸುತ್ತ ಬಂದಿರುವುದೂ, ವ್ಯಾಸರು ಅದನ್ನು ಬರೆದರೆಂಬುದೂ ಸ್ಪಷ್ಟವೇ ಇದೆ. ಆದರ ಕಾಲದ ಬಗ್ಗೆ ಇದಮಿತ್ಥಂ ಎಂದು ಹೇಳುವಂತಿಲ್ಲವಾದ್ದರಿಂದ ಇಂತಹ ಪುರಾಣಕಾಲದ ಭಾರತದ ಅಂತರ್ಗತವಾಗಿರುವ ಭಗವದ್ಗೀತೆಗೆ ಇಂದು ಪ್ರಾಧಾನ್ಯ ನೀಡಬೇಕೆ? ಅಂದಿನ ಸಮಾಜಕ್ಕೆ ಹೊಂದಿದ ಜೀವನ ಧರ್ಮಯೋಗವನ್ನು ಇಂದೂ ಸಂಗತವೆಂದು ಸನ್ಮಾನಿಸುವುದು ಸಮರ್ಪಕವೆ?–ಹೀಗೆ ಆಭ್ಯಂತರವನ್ನು ಸೂಚಿಸುವವರಿಗೇನೂ ಕೊರತೆಯಿಲ್ಲ.

ಇಂದಿನ ಭಗವದ್ಗೀತೆಯ ಸಾಂಗತ್ಯದ ಬಗ್ಗೆ ಮಾತನಾಡುವಾಗ ಇಂದಿನ ಪರಿಸ್ಥಿತಿಯನ್ನೂ ಗಮನಿಸುವುದು ಒಳ್ಳೆಯ ಅಂಶವಾಗಬಹುದೇನೊ. ಪರಂಪರೆಯಿಂದ ಬಂದ ಮಾನವೀಯ ಆದರ್ಶಗಳು, ಸನಾತನಧರ್ಮದ ಮೌಲ್ಯಗಳು ಬಾಳನ್ನು ನಡೆಸುತ್ತಿರುವಂತೆಯೇ, ಯಂತ್ರನಾಗರಿಕತೆಯ ಹೊಸ ಹೊಸ ಆವಿಷ್ಕಾರಗಳು, ಹೊಸ ಹೊಸ ಪ್ರಭಾವಗಳು, ಮಾನವನನ್ನು ಸಮಷ್ಟಿದೃಷ್ಟಿಯಿಂದ ಹಿಂದೆಳೆದು, ವೈಯುಕ್ತಿಕ ಲಾಭನಷ್ಟಗಳ ಬೇರೀಜು ಮಾಡುವಲ್ಲಿ ತೊಡಗಿಸಿ, ನಿತ್ಯಅಸ್ಥಿರತೆ, ಅಶಾಂತಿ, ಅಸಮಾನತೆ ನಶ್ವರಸುಖಗಳತ್ತ ತಿರುಗುವಂತೆ ಮಾಡಿ, ತುರ್ತು ಸುಖದ ಮೃಗಜಲದ ಬೆನ್ನಟ್ಟುವಂತೆ ಮಾಡಿವೆ ಎಂಬುದೂ ಸ್ಪಷ್ಟವಾಗಿದೆ. ಇಂತಲ್ಲಿ ನರ-ಮಾನವನಿಗೆ ಚಿತ್ತ ಕ್ಷೋಭೆ ಅತ್ಯಂತ ಸಹಜವಾಗಿದೆ. ಮಾರ್ಗದರ್ಶನಕ್ಕೆ ಆ ಪಾರ್ಥಸಾರಥಿಯತ್ತ ನೋಡಿದರೆ ಅದು ಸಮಯೋಚಿತವೇ ಆಗುತ್ತದೆ ಎನ್ನಬೇಕು.

ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ।
ಶುನಿ ಚೈವ ಶ್ವಪಾಕೇ ಚ ಪಂಡಿತಾ ಸಮದರ್ಶಿನಃ ॥ (ಗೀತೆ 5–18)
ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ।
ಈಕ್ಷ್ಯತೇ ಯೋಗ ಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ (6–29)

ಈ ರೀತಿಯ ಸಮಭಾವ ಬರುವುದೆಂತು-ಎಂದು ಕೇಳಿದರೆ ಅದು ತೃಪ್ತಭಾವದಿಂದ ಎಂದು ಉತ್ತರ ಸಿಗುತ್ತದೆ. ದೊರೆತದ್ದರಲ್ಲಿ ತೃಪ್ತಿ ಹೊಂದಿ ಹೆಚ್ಚಿನದನ್ನು ಆಶಿಸದೆ ಇದ್ದಲ್ಲಿ, ಎಲ್ಲರನ್ನೂ ಸಮಾನವೆಂದು ಪರಿಗಣಿಸಬಹುದು.

ಯದೃಚ್ಛಾಲಾಭ ಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ
ಸಮಸ್ಸಿದ್ಧಾವ ಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ (4–22)

ಬಂದದ್ದರಲ್ಲಿ ತೃಪ್ತಿ ಹೊಂದಿ, ದ್ವಂದ್ವ ಭಾವವಿಲ್ಲದೆ, ಮತ್ಸರವಿಲ್ಲದೆ, ಸಿದ್ಧಿ ಅಸಿದ್ಧಿಗಳಲ್ಲಿ ಮನವಿಲ್ಲದಿರುವವನು ಬುದ್ಧನಾಗುವುದಿಲ್ಲ-ಎಂದು ಕೃಷ್ಣ ಹೇಳಿದ್ದಾನೆ. ಎಂದರೆ ಇವೆಲ್ಲ ಬುದ್ಧಿ ಸತ್ಯಗಳು ಅನುಭವಸತ್ಯಗಳಾಗುವುದು ಹೇಗೆ – ಎಂಬ ಪ್ರಶ್ನೆಯುಂಟಾಗಬಹುದು. ಅದಕ್ಕೆಂದು ಅವನು ಹೇಳಿಯೇ ಇದ್ದಾನೆ–

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ
ಮಾ ಕರ್ಮಫಲ ಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ (2–47)

ಕೆಲಸ ಮಾಡುವುದಕ್ಕೆ ಮಾತ್ರವೇ ಅಧಿಕಾರ, ಕರ್ಮಫಲದಲ್ಲಿ ಅಧಿಕಾರವಿಲ್ಲ, ಆ ಕರ್ಮಫಲದಾಸೆಯನ್ನು ಬಿಡಬೇಕು. ಅದು ಅಷ್ಟು ಸುಲಭವಲ್ಲವಾಗಿಯೇ ಅಶಾಂತಿ, ಅಸಮಾನತೆ,–ಇತ್ಯಾದಿ. ಆದರೂ ಪ್ರಯತ್ನ ಪಡುವ ಪ್ರಾಮಾಣಿಕತೆ ಇರಬೇಕು.

ಗೀತಾಜಯಂತಿಯ ಶುಭದಿನದಂದು ಅವನೇ ಹೇಳಿದ ಮಾರ್ಗದಲ್ಲಿ ನಡೆಯುವ ಶಕ್ತಿಯನ್ನೂ ಅವನೇ ಕೊಟ್ಟು ಗಮ್ಯವನ್ನು ತಲುಪಿಸಲಿ ಎಂದು ಶ್ರೀವೆಂಕಟೇಶ್ವರಸ್ವಾಮಿಯನ್ನೂ ಪ್ರಾರ್ಥಿಸುತ್ತ ನಡೆಯುವ ಪ್ರಯತ್ನಪಡುವ.

# ಮಹಾಭಾರತದ ವೈಶಿಷ್ಟ್ಯ

ವ್ಯಾಸಮಹಾಭಾರತವು ಒಂದು ವಿಶ್ವಮಾನ್ಯವಾದ ಕೃತಿ. ಅದು ಭಾರತದ ಎಲ್ಲ ಭಾಷೆಗಳಿಗೂ, (ಹಿಂದಿಭಾಷೆ ವಿನಾ) ಪ್ರಪಂಚದ ಅನೇಕ ಭಾಷೆಗಳಿಗೂ ಭಾಷಾಂತರಿತವಾಗಿದೆ. ಭಾರತೀಯ ಸಂಸ್ಕೃತಿ ಮತ್ತು ನಾಗರಿಕತೆಗಳಿಗೆ ಅದು ಕೈಗನ್ನಡಿ. ಭಾರತೀಯ ಜ್ಞಾನ ಮತ್ತು ವಿಜ್ಞಾನಗಳ ಭಂಡಾರ. ಅದು ಹಿಮವತ್ಪರ್ವತದಂತೆಯೂ ರತ್ನಾಕರದಂತೆಯೂ ಬಹುರತ್ನಪೂರಿತವೂ ಅಗಾಧವೂ ಅಪಾರವೂ ಆದುದು. ಇದು ೨೫೦೦ ವರ್ಷಗಳ ಹಿಂದೆ ರಚಿತವಾದುದೆಂದು ವಿಮರ್ಶಕರು ಅಭಿಪ್ರಾಯ ಪಟ್ಟಿದ್ದರೂ, ಇಂದಿಗೂ ಚಿರನೂತನವಾಗಿಯೇ ಕಾಣುತ್ತಿದೆ. ಅದರ ಪ್ರಯೋಜನವು ತ್ರಿಕಾಲಾಬಾಧಿತವಾಗಿ ಸಾರ್ವಕಾಲಿಕ ಸಾರ್ವದೇಶಿಕ ಸಾರ್ವಭೌಮಿಕವಾಗಿದೆ. ಅದು ಪರ್ಜನ್ಯನಂತೆ ಅಪಾರವೂ ಅಕ್ಷಯವೂ ಆಗಿದೆ.

ಯೇನ ತ್ವಯಾ ಭಾರತದೀಪಪೂರ್ಣಃ
ಪ್ರಜ್ವಾಲಿತೋ ಜ್ಞಾನಮಯ ಪ್ರದೀಪಃ,
ತಥಾ ಭಾರತ ಸೂರ್ಯೇಣ
ಪ್ರಜಾವಿನಿಹಿತಂ ತಮಃ
ಪುರಾಣಪೂರ್ಣಚಂದ್ರೇಣ
ಶ್ರುತಿಜ್ಯೋತ್ಸ್ನಾ ಪ್ರಕಾಶಿತಾ
ನೃಬುದ್ಧಿ ಕೈರವಾಣಾಂ ಚ
ಕೃತಮೇತತ್ಪ್ರಕಾಶನಂ
ಇತಿಹಾಸ ಪ್ರದೀಪೇನ
ಮೋಹಾವರಣಘಾತಿನಾ
ಲೋಕಗರ್ಭಕ್ಷತಂ ಕೃತ್ಸ್ನಂ
ಯಥಾವತ್ಸಂಪ್ರಕಾಶತೇ

ಭಾರತದಿಂದ ಎಲ್ಲ ವಿಧವಾದ ಜ್ಞಾನದೀಪಗಳೂ ಪ್ರಜ್ವಲಿಸುತ್ತವೆ. ವೇದಗಳಂತೆಯೇ ಸತ್ಯಾನ್ವೇಷಣೆಯೇ ಅದರ ಪ್ರಧಾನ ಧ್ಯೇಯ. ಅದರ ಉಪಬ್ರಹ್ಮಣಕ್ಕಾಗಿಯೇ ಇದು ರಚಿತವಾಗಿರುವುದು. ಅಂದರೆ ಅದರ ವ್ಯಾಖ್ಯಾನದಂತಿರುತ್ತದೆ. ಜಟಿಲವೂ ಸಂದಿಗ್ಧವೂ ಆದ ಅನೇಕ ವೇದೋಕ್ತ ವಿಷಯಗಳನ್ನು ದೃಷ್ಟಾಂತ ಮತ್ತು ಉಪದೇಶಗಳಿಂದ ಸ್ಪಷ್ಟಪಡಿಸುವುದರಿಂದ ಅದು ಪಂಚಮವೇದವಾಗಿದೆ. ಅಷ್ಟೇ ಅಲ್ಲದೆ ದೇವತೆಗಳನ್ನೂ ಋತಸತ್ಯಗಳನ್ನೂ ಪರಮಾತ್ಮನ ವಿಷಯವನ್ನು ಏಕತ್ರ ತಿಳಿಸುವುದರಿಂದ ಅವುಗಳಿಗಿಂತ ಒಂದು ಪಾಲು ಮೇಲೆ. ಶ್ರುತ್ಯರ್ಥವನ್ನು ವಿಶದಪಡಿಸುವುದರಿಂದ ಅದು ಸ್ಮೃತಿ, ಇದು ಹೀಗೆ ಇತ್ತು (ಇತಿ–ಹಾ–ಅಸ) ಎಂದು ತಿಳಿಸುವುದರಿಂದ ಅದು ಇತಿಹಾಸ. ಕಥೆ ಉಪಕಥೆಗಳನ್ನು ನೀತಿ ಧರ್ಮಗಳ ಪ್ರತಿಪಾದನೆಗೆ ಉಪಯೋಗಿಸಿಕೊಂಡಿರುವುದರಿಂದ ಅದು ಆಖ್ಯಾನ, 'ಪುರಾಣಂ, ಇತಿವೃತ್ತಂ, ಆಖ್ಯಾಯಿಕೋದಾಹರಣಂ, ಧರ್ಮ ಶಾಸ್ತ್ರಂ ಚೇತಿ,' ಎಂಬುದು ಸರ್ವವಿದಿತ.

ಅದು ಕಾವ್ಯ ಚೂಡಾಮಣಿಯೂ ಹೌದು. ವೀರರಸ ಪ್ರಧಾನಕಾವ್ಯವಾದರೂ ನವರಸಗಳಿಗೂ ಆಕರವಾಗಿದೆ, ಆದರೂ ಅದರ ಪ್ರಧಾನ ದೃಷ್ಟಿ ಶಾಂತಿರಸ ಪ್ರತಿಪಾದನೆ. ಉತ್ತಮ ಕಾವ್ಯಕ್ಕೆ ಬೇಕಾದ ರಸಪುಷ್ಟಿ, ಭಾವಪುಷ್ಟಿ, ಅಲಂಕಾರ ರೀತಿ, ಗುಣ, ಪಾತ್ರವೈವಿಧ್ಯ, ಮನೋವಿಶ್ಲೇಷಣ ಜೀವನ ವಿಮರ್ಶೆ, ಛಂದೋವೈಚಿತ್ರಿ–ಇವುಗಳಿಂದ ಕೂಡಿದೆ. ಅಲ್ಲಿ ಬರುವ ಅನೇಕ ಸಂಭಾಷಣೆಗಳು ಬಹುರಮಣೀಯವಾಗಿವೆ. ಆದುದರಿಂದಲೇ ಇದು ಮುಂದಿನ ಅನೇಕ ಕಾವ್ಯನಾಟಕಗಳಿಗೆ ಆಕರವಾಗಿದೆ.

ಧರ್ಮಾರ್ಥಕಾಮ ಮೋಕ್ಷೇಷು
ವೈಚಕ್ಷಣ್ಯಂ ಕಲಾಸು ಚ
ಕರೋತಿ ಕೀರ್ತಿಂ ಪ್ರೀತಿಂ ಚ
ಸಾಧುಕಾವ್ಯವಿಚಕ್ಷಣಂ

ಎಂಬುದು ಕಾವ್ಯದ ವಿಷಯವಾದ ವಿಮರ್ಶಕರ ಅಭಿಪ್ರಾಯ. ಆದುದರಿಂದಲೇ ವ್ಯಾಸರು ತಮ್ಮ ಕಾವ್ಯದಲ್ಲಿ

ಧರ್ಮೇ ಚಾರ್ಥೇ ಚ ಕಾಮೇ ಚ
ಮೋಕ್ಷೇಷು ಪುರುಷರ್ಷಭ
ಯದಿಹಾಸ್ತಿ ತದನ್ಯತ್ರ
ಯನ್ನೇಹಾಸ್ತಿ ನ ತತ್ ಕ್ವಚಿತ್

ಎಂದು ವೀರಪ್ರತಿಜ್ಞೆಯನ್ನು ಮಾಡಿದ್ದಾರೆ.

ಭಾರತವು ಭರತವಂಶದವರಾದ ಕೌರವ ಪಾಂಡವರ ಹೋರಾಟವಾಗಿ ಮೇಲ್ನೋಟಕ್ಕೆ ಕಂಡರೂ, ಅದು ವಾಸ್ತವವಾಗಿ ಧರ್ಮಾಧರ್ಮಗಳ ಹೋರಾಟ ಮತ್ತು ಧರ್ಮದ ಜಯವನ್ನು ಕುರಿತ ಗ್ರಂಥ, ಅದಕ್ಕಾಗಿಯೇ ಭಾರತಕ್ಕೆ ಜಯ ನೆಂಬ ಹೆಸರಾದುದು, ಪಾಂಡವರ ವಿಜಯವನ್ನು ಮಾತ್ರ ಕುರಿತುದಾಗಿದ್ದಾಗ ಅದು 'ಜಯ' ವಾಗಿತ್ತು. ಉಪದೇಶಗಳನ್ನೊಳಗೊಂಡಾಗ 'ಭಾರತ'ವಾಯಿತು. ಆಖ್ಯಾನ–ಉಪಾಖ್ಯಾನಗಳಿಂದ ಪೂರ್ಣವಾದಾಗ ಅದು 'ಮಹಾಭಾರತ' ವಾಯಿತು.

'ಯತೋಧರ್ಮಃ ತತೋ ಜಯಃ' ಎಂಬ ವಾಕ್ಯದ ಪ್ರಕಾರ ಭಾರತಕ್ಕೆ ಆ ಹೆಸರು ಅನ್ವರ್ಥವಾಗಿದೆ. ಆದುದರಿಂದಲೇ ಅದರ ನಾಯಕ ಧರ್ಮರಾಜ. ಪರಮಾರ್ಥಕ್ಕನುಗುಣವಾಗಿ ಅರ್ಥಸಂಗ್ರಹ ರೀತಿಯನ್ನು ಅದು ಪ್ರತಿಪಾದಿಸುವುದರಿಂದ ಅದು ಅರ್ಥಶಾಸ್ತ್ರವೂ ಹೌದು. ಧರ್ಮ ವಿರೋಧವಿಲ್ಲದ ಕಾಮವನ್ನು ಅದು ಉಪದೇಶಿಸುವುದರಿಂದ ಅದು ಕಾಮಶಾಸ್ತ್ರ, 'ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಪುರುಷರ್ಷಭ' ಎಂಬುದು ಭಗವದ್ಗೀತೆಯ ಉಕ್ತಿ. ಪರಮ ಪುರುಷಾರ್ಥವಾದ ಮೋಕ್ಷಶಾಸ್ತ್ರವೂ ಅದಾಗಿದೆ. ಮೋಕ್ಷದ ಸ್ವರೂಪವನ್ನು ವಿಶದ ಪಡಿಸುವ ಅನೇಕ ಭಾಗಗಳು ಅಲ್ಲಿವೆ. 'ಭಗವದ್ಗೀತೆ', 'ನಾರಾಯಣೀಯ', 'ಸನತ್ಸುಜಾತೀಯ', 'ವಿಷ್ಣುಸಹಸ್ರನಾಮ'- ಇವು ಅವುಗಳಲ್ಲಿ ಪ್ರಧಾನವಾದುವು. ಆಸ್ತಿಕನಾಸ್ತಿಕ ಪಂಥಗಳ ಎಲ್ಲ ತತ್ತ್ವಗಳೂ ಅಲ್ಲಿ ಪ್ರತಿಪಾದಿತವಾಗಿವೆ. ಆದುದರಿಂದಲೇ ಮತ – ತ್ರಯಾಚಾರ್ಯರುಗಳು ತಮ್ಮ ದರ್ಶನದ ಸಿದ್ಧಾಂತಕ್ಕೆ ಮಹಾಭಾರತವನ್ನು ಪ್ರಧಾನವಾದ ಪ್ರಸ್ಥಾನಗ್ರಂಥವನ್ನಾಗಿ ಅಂಗೀಕರಿಸಿದ್ದಾರೆ. ತತ್ತ್ವಹಿತ ಪುರುಷಾರ್ಥಗಳನ್ನು ಪ್ರತಿಪಾದಿಸುವ ಶ್ರೇಷ್ಠ ಗ್ರಂಥವದು. ಇವೆಲ್ಲವನ್ನು ಅದು ಅವಶ್ಯಕತೆಗೂ ಸಂದರ್ಭಗಳಿಗೂ ಅನುಗುಣವಾಗಿ ಪ್ರಭುಸಂಮಿತ ಮಿತ್ರಸಂಮಿತ ಮತ್ತು ಕಾಂತಾಸಂಮಿತಗಳ ದ್ವಾರಾ ಪ್ರದರ್ಶಿಸುವ ಏಕೈಕ ಗ್ರಂಥ.

ಗ್ರಂಥವಿಸ್ತಾರದಲ್ಲಿಯೂ ಅದಕ್ಕೆ ಹೋಲಿಕೆಯಾಗುವ ಬೇರೊಂದು ಗ್ರಂಥ ಪ್ರಪಂಚದಲ್ಲಿಯೇ ಇಲ್ಲ. ಅದು ಲಕ್ಷಗ್ರಂಥ ಪರಿಮಿತಿಯಿಂದ ಕೂಡಿದೆ. ೨೯೦೯ (ಎರಡುಸಾವಿರದ ಒಂಭೈನೂರು ಒಂಭತ್ತು) ಅಧ್ಯಾಯಗಳಿಂದ ಕೂಡಿದೆ. ಇದು ಸುಪ್ರಸಿದ್ಧವಾದ ಗ್ರೀಕ್ ಸಾಹಿತ್ಯದ ಮಹಾಗ್ರಂಥಗಳಾದ 'ಇಲಿಯಡ್' ಮತ್ತು 'ಒಡಿಸ್ಸಿ'ಗಳ ಒಟ್ಟಾರೆ ಪ್ರಮಾಣಕ್ಕೆ ಸುಮಾರು ಎಂಟರಷ್ಟಿದೆ. 'ಭಾರತ' ಶಬ್ದದ ವ್ಯುತ್ಪತ್ತಿಯು ಮುಂದಿನ ಶ್ಲೋಕದಲ್ಲಿ ಪ್ರಕಾರಾಂತರವಾಗಿ ನಿರೂಪಿತವಾಗಿದೆ.

ಭಾತಿ ಸರ್ವೇಷು ವೇದೇಷು
ರತಿಃ ಸರ್ವತ್ರ ಜಂತುಷು
ತರಣಂ ಸರ್ವತೀರ್ಥಾನಾಂ
ತೇನ ಭಾರತ ಮುಚ್ಯತೆ

ಶ್ರೀಮನ್ಮಧ್ವಾಚಾರ್ಯರು ಇದನ್ನು 'ಮಹತ್ತ್ವಾತ್ ಭಾರವತ್ವಾಚ್ಚ ಮಹಾಭಾರತ

ಡಾ॥ ಎನ್. ಅನಂತರಂಗಾಚಾರ್

ಮುಚ್ಛಕೆ' ಎಂಬ ವಿವರಣೆಯನ್ನು ಪುಷ್ಟೀಕರಿಸಿದ್ದಾರೆ.

ಮಹಾಭಾರತವನ್ನು ರಚಿಸಿದವರು ಭಗವಾನ್ ವೇದವ್ಯಾಸರು. ಅವರಿಗೆ ಬಾದರಾಯಣರೆಂದು ಹೆಸರು. ಅವರು ತ್ರಿಕಾಲಜ್ಞಾನಿಗಳು. ಬಹು ಉದಾರಿಗಳು; ವಸುಧೈಕಕುಟುಂಬಿಗಳು, ವಿಶ್ವ ಮಾನವರು. ಮುಂದಿನ ಶ್ಲೋಕದಲ್ಲಿ ಪ್ರಕಾರಾಂತರವಾಗಿ ಅವರು ತ್ರಿಮೂರ್ತಿಗಳ ಅವತಾರವೆಂದು ಸೂಚಿಸಿದೆ.

ಅಚತುರ್ವದನೋ ಬ್ರಹ್ಮಾ
ದ್ವಿಬಾಹುರಪರೋ ಹರಿಃ।
ಅಫಾಲಲೋಚನಶ್ಶಂಭುಃ
ಭಗವಾನ್ ಬಾದರಾಯಣಃ ॥

(ಬಾದರಾಯಣರು ನಾಲ್ಕು ಮುಖವಿಲ್ಲದ ಬ್ರಹ್ಮ, ಎರಡೇ ಕೈಯುಳ್ಳ ವಿಷ್ಣು, ಹಣೆಗಣ್ಣಿಲ್ಲದ ಮಹೇಶ್ವರ).

ಅವರು ಅಖಂಡ ಪ್ರಪಂಚಕ್ಕೆ ಅನಂತಕಾಲದ ಜೀವನ ಸೌಖ್ಯವನ್ನುಂಟುಮಾಡುವ ಜೀವನ ಮಾರ್ಗವನ್ನು ತಿಳಿಯಪಡಿಸುವುದಕ್ಕಾಗಿ ಲೋಕ ಕಲ್ಯಾಣಕ್ಕಾಗಿ–ಮಹಾಭಾರತವನ್ನು ರಚಿಸಿದರು. ಅವರ ಪ್ರತಿಭೆ ಅನ್ಯಾದೃಶವಾದುದು. ಅದಕ್ಕೆ ನಿಲುಕದ ವಿಷಯವೇ ಇಲ್ಲ. ಅದಕ್ಕಾಗಿಯೇ 'ವ್ಯಾಸೋಚ್ಛಿಷ್ಟಂ ಜಗತ್ಸರ್ವಂ' ಎಂಬ ವಾಕ್ಯವು ಲೋಕ ಪ್ರಸಿದ್ಧವಾಗಿದೆ. ಅವರು ತಮ್ಮ ಮೇಲಿನ ಉದ್ದೇಶವನ್ನು ಸಾಧಿಸಲು ಜಗತ್ತಿನಲ್ಲಿರುವ ದೇವ, ತಿರ್ಯಕ್, ಮಾನುಷ, ಪ್ರಪಂಚದ ಎಲ್ಲ ಸ್ವಭಾವಗಳನ್ನು ಗುಣಾವಗುಣಗಳನ್ನೂ ಧರ್ಮಾಧರ್ಮಗಳನ್ನು ಕೂಲಂಕಷವಾಗಿ ವಿಮರ್ಶೆ ಮಾಡಿದ್ದಾರೆ. ಜೀವಜಂತುಗಳಲ್ಲಿರುವ, ಇಲ್ಲದಿರುವ, ಇರಬೇಕಾದ ಗುಣಗಳನ್ನೂ ಅವುಗಳ ಸಾಧಕ ಬಾಧಕಗಳನ್ನೂ ಫಲಾಫಲಗಳನ್ನೂ ಕಥೆ ಉಪಕಥೆ, ಆಖ್ಯಾನ, ಉಪಾಖ್ಯಾನ, ಉಪದೇಶ ಮತ್ತು ದೃಷ್ಟಾಂತಗಳ ಮೂಲಕ ವಿಶದೀಕರಿಸಿದ್ದಾರೆ. ದೈವೀ ಮತ್ತು ಆಸುರೀ ಶಕ್ತಿಗಳ ಸ್ವರೂಪವನ್ನೂ ಪ್ರಕೃತಿ ವಿಕೃತಿಗಳ ವಿವರಣೆಗಳನ್ನೂ ತ್ಯಾಜ್ಯ ಮತ್ತು ಗ್ರಾಹ್ಯವಾದ ಅಂಶಗಳನ್ನೂ ಸ್ಪಷ್ಟಪಡಿಸಿದ್ದಾರೆ. ಚತುರ್ವಿಧ ಪುರುಷಾರ್ಥಗಳಾದ ಧರ್ಮಾರ್ಥ ಕಾಮ ಮೋಕ್ಷಗಳ ಸ್ವರೂಪವನ್ನು ತಿಳಿಸಿ ಅವುಗಳ ಮಧುರ ಮೇಳನವೇ ಜೀವನದ ಪ್ರಧಾನ ಮೌಲ್ಯವೆಂದು ಘೋಷಿಸಿದ್ದಾರೆ.

ಅವುಗಳ ವಿವರಣೆ ಹೀಗಿದೆ:– ಧರ್ಮವೆಂಬ ಶಬ್ದವು 'ಧೃ' ಎಂಬ ಧಾತುವಿನಿಂದ ಜನ್ಯವಾದುದು. ಧರಿಸಿರುವುದು, ಹಿಡಿದಿರುವುದು, ಎಂಬುದು ಅದರ ಅರ್ಥ. (ಪ್ರಾಣಶಕ್ತಿಯು ಶರೀರವನ್ನು ಧರಿಸಿರುವ ಹಾಗೆ) ಪ್ರಪಂಚದ ಎಲ್ಲ ಶಕ್ತಿಯನ್ನು ಧರಿಸಿರುವುದು ಧರ್ಮ. ಧರ್ಮವನ್ನು ವಿಶ್ವಧಾರಕ ಶಕ್ತಿಯೆಂದು ಕರೆಯಬಹುದು. ಅದನ್ನೇ ವೇದವು 'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ' ಎಂದು ಹೇಳಿರುವುದು. ಬೇರೆ ರೀತಿಯಲ್ಲಿ ಹೇಳುವುದಾದರೆ ಬಾಳ ಮೇಲ್ಮೆಗೆ ಸಾಧಕವಾದುದು ಧರ್ಮ. ಬಾಳನ್ನು ನಾಶಗೊಳಿಸುವುದು ಅಧರ್ಮ, ಒಂದು ವಸ್ತುವು ತನ್ನ ನೈಜಸ್ಥಿತಿಯಲ್ಲಿರುವುದು ಧರ್ಮವೆನಿಸಿಕೊಳ್ಳುತ್ತದೆ. ಜೀವನ ಸ್ವರೂಪವನ್ನರಿತು ಅದನ್ನು ಕಾಪಾಡಿಕೊಳ್ಳುವುದು ಧರ್ಮ. ಅರ್ಥವೆಂಬುದು ಸೃಷ್ಟಿಯಲ್ಲಿರುವ ವಸ್ತುಗಳ ಸಮೂಹ. ಈ ವಸ್ತುಗಳನ್ನು ಬಳಸಿಕೊಳ್ಳುವವರು ಧರ್ಮಕ್ಕೆ ಹಾನಿ ಇಲ್ಲದಂತೆ ಬಳಸಿಕೊಳ್ಳಬೇಕು. ಮೂರನೆಯ ಪುರುಷಾರ್ಥವಾದ ಕಾಮಕ್ಕೆ 'ಬಯಕೆ' ಎಂದರ್ಥ. ಇದು ಜೀವನ ಬಾಳುಟಕ್ಕೆ ಆಗತ್ಯ ಅಷ್ಟೇ ಅಲ್ಲ ಅನಿವಾರ್ಯ. ಆದರೆ ಆ ಬಯಕೆಯು ಬಾಳ್ವೆಗೆ ಮಾರಕವಾಗದಂತೆ–ಪೋಷಕವಾಗುವ ಹಾಗೆ ಬಳಸಿಕೊಳ್ಳುವುದು ಜಾಣ್ಮೆ. ಧರ್ಮಾರ್ಥಗಳಿಗೆ ವಿರೋಧವಿಲ್ಲದೆ ಹೊಂದಿಸಿಕೊಳ್ಳುವುದು ಶ್ಲಾಘ್ಯವಾದ ಮೂರನೆಯ ಪುರುಷಾರ್ಥ–ಕಾಮ. ಅದೇ ಅರಿಷಡ್ವರ್ಗದ ಏಕದೇಶವಾದ ಕಾಮವಾದರೆ ತ್ಯಾಜ್ಯ. ಧರ್ಮ ಅವಿರೋಧವಾದ ಕಾಮವು ಭಗವಂತನ ಪ್ರ[illegible]ರೂಪವೇ ಆಗುತ್ತದೆ. ಮೊದಲು ಮೂರು ಪುರುಷಾರ್ಥಗಳ ಸಮನ್ವಯವು ಜೀವನವನ್ನು ಮೋಕ್ಷಾಭಿಮುಖವಾಗಿ ಮಾಡುತ್ತದೆ, ಈ ಧರ್ಮಾರ್ಥಕಾಮ ಮೋಕ್ಷಗಳ ಸಹಜ ಮೇ[illegible] ನವೇ ಬಾಳಿನ ಸಹಜ ಮೌಲ್ಯಗಳು. ಇದರ[illegible] ಇಂದ್ರಿಯ ಸೌಖ್ಯಗಳೂ ಸೇರಿವೆ, ಧರ್ಮಕ್ಕೆ ಅವಿರೋಧವಾದ ಅರ್ಥ ಕಾಮಗಳು ಇಹಪ[illegible] ಜೀವನ ಸಂಪತ್ಸಮೃದ್ಧಿಗೆ ಕಾರಣವಾಗುತ್ತವೆ.

ಒಂದು ವಿಷಯ ಜ್ಞಾಪಕದಲ್ಲಿಡಬೇಕು. ಸೌಖ್ಯ[illegible]ದಲ್ಲಿ ಬಾಹ್ಯ, ಆಂತರ್ಯ ಎಂಬ ಎರಡು ರೀ[illegible]ಯುಂಟು. ಬಾಹ್ಯವಾದ ಭೋಗವು ನಶ್ವ[illegible]ವಾದುದು, ಅಲ್ಪಕಾಲಿಕವಾದುದು. ಆದುದರಿಂದಲೆ ಅತ್ಯುತ್ತಮವಾದ ಬಾಹ್ಯ ಸೌಕರ್ಯಗಳಿದ್ದರೂ ಇಂದಿನ ಜಗತ್ತಿನಲ್ಲಿ ಮನಸ್ಸಿಗೆ ನೆಮ್ಮದಿಯಿಲ್ಲ[illegible] ಕ್ಷೋಭೆ, ಅಸೂಯೆ, ಸ್ಪರ್ಧೆ, ಕ್ರೌರ್ಯಾದಿಗಳ ತಾಂಡವವಾಡುತ್ತಿರುವುವು. ಆಂತರ್ಯ ಸೌಖ್ಯ[illegible] ದಿಂದ ಯೋಗಾನಂದ–ಉಂಟಾಗುತ್ತದೆ. ಪ[illegible]ಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ಭೋ[illegible] ಯೋಗಗಳ ಸಮನ್ವಯವೇ ಬಾಳಿನ ಪರಮ ಧ್ಯೇಯ.

ಈ ನಿತ್ಯವೂ ಸಾರ್ವತ್ರಿಕವೂ ಸಾರ್ವಕಾಲಿಕವೂ ಸಾರ್ವಭೌಮಿಕವೂ ಆದ ಸುಖಜೀವನದ ಮರ್ಮ[illegible]ವನ್ನು ತಿಳಿಯಪಡಿಸುವುದು, ಆದರ್ಶ ಅನಾದರ್ಶ[illegible]ಗಳನ್ನೂ ಸ್ವರೂಪ ವಿರೂಪಗಳನ್ನೂ ಆಸುರಿ ದೈವೀ ಸಂಪತ್ತುಗಳನ್ನೂ ಸತ್ತ್ವರಜಸ್ತಮಸ್[illegible]ಗಳೆಂಬ ತ್ರಿಗುಣಾತ್ಮಕವಾದ ಪ್ರಪಂಚದ ಸೃಷ್ಟಿ ವೈವಿಧ್ಯವನ್ನೂ, ಅದರಲ್ಲಿ ಧರ್ಮದ ಪರಮೋತ್ಕರ್ಷವನ್ನು ತಿಳಿಯಪಡಿಸುವುದು ಮಹಾಭಾರತದ ಪರಮಧ್ಯೇಯ.

ಮೇಲೆಯೇ ತಿಳಿಸಿರುವಂತೆ ವ್ಯಾಸರ ದೃಷ್ಟಿಯ[illegible] ಸಮಾಜವು ಧರ್ಮಪ್ರಧಾನವಾದುದು. ಅದ[illegible] ಸರಿಯಾದ ನಿರ್ವಹಣೆಗೆ ಧರ್ಮವನ್ನು ವಿಶೇ[illegible] ಧರ್ಮ, ಆಪದ್ಧರ್ಮ, ವರ್ಣಧರ್ಮ, ಆಶ್ರ[illegible] ಧರ್ಮ, ಕಾಲಧರ್ಮ–ದೇಶಧರ್ಮ, ಎಂಬುದಾ[illegible] ವಿವಿಧ ರೀತಿಗಳಲ್ಲಿ ವಿಭಾಗಿಸಿ, ಅವುಗಳೊಂದೊಂದ[illegible] ವಿವರಣೆಗಳನ್ನೂ ಸ್ಪಷ್ಟವಾಗಿ ತಿಳಿಸಿ ಅವುಗ[illegible] ಪ್ರಕಾರಗಳನ್ನು ಸ್ಪಷ್ಟಪಡಿಸಿದ್ದಾರೆ. 'ಧರ್ಮ[illegible] ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತ[illegible] (ಧರ್ಮವು ತನ್ನನ್ನು ಕೊಂದವರನ್ನು ಕೊಂ[illegible] ಹಾಕುತ್ತದೆ. ರಕ್ಷಿಸುವವರನ್ನು ರಕ್ಷಿಸುತ್ತದೆ) ಎಂಬುದು ಅವರ ಹೆಜ್ಜೆ ಹೆಜ್ಜೆಯ ಸಲ್ಲ[illegible] ಅದಕ್ಕನುಗುಣವಾಗಿಯೇ ವ್ಯಾಸರು ತಮ್ಮ ಕೃ[illegible]ಯಲ್ಲಿ ಜೀವನದಲ್ಲಿ ಅನುಸರಿಸಬೇಕಾದ ಕೆಲ[illegible] ಪ್ರಧಾನ ಗುಣಗಳನ್ನು ನಿರೂಪಿಸಿದ್ದಾರೆ. ಅ[illegible]

## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

ತಿ. ತಿ. ದೇ.

ಪ್ರಕಾರ ಮಾನವನು ಪಶುಪಕ್ಷಿಗಳ ಹಾಗೆ ಇರಬಾರದು. ಅವನು ದಿನದಿಂದ ದಿನಕ್ಕೆ ಸುಸಂಸ್ಕೃತನಾಗಬೇಕು. ಅಷ್ಟೇ ಅಲ್ಲ ಅವನು ವಿಶ್ವಮಾನವನಾಗಬೇಕು. ಇದನ್ನು ಅವನು ಸ್ವಪ್ರಯತ್ನದಿಂದಲೇ ಸಾಧಿಸಬೇಕು ಎಂಬ ವಿಷಯವನ್ನು ಅವರು.

ಉದ್ಧರೇದಾತ್ಮನಾತ್ಮಾನಂ
ನಾತ್ಮಾನ ಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುಃ
ಆತ್ಮೈವ ರಿಪು ರಾತ್ಮನಃ ॥

ಎಂಬ ಗೀತಾ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. ಅದರಲ್ಲಿಯೂ ಪುರುಷ ಪ್ರಯತ್ನಕ್ಕೆ ಪ್ರಾಮುಖ್ಯ.

ಯಾದೃಶಂ ವಪತೇ ಬೀಜಂ
ಕ್ಷೇತ್ರಮಾಸಾದ್ಯ ಕರ್ಷಕಃ ।
ಸುಕೃತೇ ದುಷ್ಕೃತೇ ವಾಪಿ
ತಾದೃಶಂ ಲಭತೇ ಫಲಂ ॥

ಕಾರ್ಯ ಸಿದ್ಧಿಯಾಗಬೇಕಾದರೆ ಪುರುಷ ಪ್ರಯತ್ನವೆಂಬ ಬೀಜವನ್ನು ಬಿತ್ತಬೇಕು. ಅದಕ್ಕನುಗುಣವಾಗಿ ಫಲವು ಬರುತ್ತದೆ. ಅಲ್ಲಿಯೂ

ಯಥಾ ಬೀಜಂ ವಿನಾ ಕ್ಷೇತ್ರಂ
ಉಪ್ತಂ ಭವತಿ ನಿಷ್ಫಲಂ ।
ತಥಾ ಪುರುಷಕಾರೇಣ
ವಿನಾ ದೈವಂ ನ ಸಿದ್ಧ್ಯತಿ ॥

ಬೀಜವಿಲ್ಲದಿದ್ದರೆ ಹೇಗೆ ಫಲವಿಲ್ಲವೋ ಹಾಗೇ ಪುರುಷಪ್ರಯತ್ನವಿಲ್ಲದೆ ದೈವಸಹಾಯವಾಗುವುದಿಲ್ಲ.

ದಯಾಪೂರ್ಣವಾದ ಅಹಿಂಸಾತತ್ತ್ವವೇ ಸರ್ವೋತ್ಕೃಷ್ಟವಾದುದೆಂಬುದು ವೇದವ್ಯಾಸರ ಅಭಿಪ್ರಾಯ.

ಅಹಿಂಸಾ ಪರಮೋ ಧರ್ಮಃ
ತಥಾಹಿಂಸಾ ಪರೋ ದಮಃ ।
ಅಹಿಂಸಾ ಪರಮಂ ದಾನಂ
ಅಹಿಂಸಾ ಪರಮಂ ಪದಂ ॥
ಅಹಿಂಸಾ ಪರಮೋ ಯಜ್ಞಃ
ತಥಾಹಿಂಸಾ ಪರಂ ಫಲಮ್ ।
ಅಹಿಂಸಾ ಪರಮಂ ಮಿತ್ರಂ
ಅಹಿಂಸಾ ಪರಮಂ ಸುಖಮ್ ॥

ಎಂಬ ಶ್ಲೋಕಗಳು ಜೀವನದಲ್ಲಿ ಅಹಿಂಸೆಗೆ ಅವರು ಕೊಟ್ಟಿರುವ ಸ್ಥಾನವನ್ನು ಶ್ರುತಪಡಿಸುತ್ತವೆ.

ವರ್ಣ ವ್ಯವಸ್ಥೆಯಲ್ಲಿ ಅವರ ಅಭಿಪ್ರಾಯವು ಬಹು ಸ್ಪಷ್ಟವಾಗಿದೆ.

ನ ವೈ ಶೂದ್ರೋ ಭವೇಚ್ಛೂದ್ರಃ
ಬ್ರಾಹ್ಮಣೋ ನ ಚ ಬ್ರಾಹ್ಮಣಃ ।
ಯತ್ರೈತಲ್ಲಕ್ಷ್ಯತೇ ಸರ್ವಂ
ವೃತ್ತಂ ಸ ಬ್ರಾಹ್ಮಣಃ ಸ್ಮೃತಃ ॥

ಹುಟ್ಟಿನಿಂದ ಯಾರೂ ಶೂದ್ರನೂ ಆಗುವುದಿಲ್ಲ ಬ್ರಾಹ್ಮಣನೂ ಆಗುವುದಿಲ್ಲ. ಆದರೆ ಬ್ರಾಹ್ಮಣ ನಾರು ?

ಯಃ ಸ್ಯಾತ್ ದಾಂತಃ ಸೋಮಪ
ಶ್ಚಾರ್ಯಶೀಲಃ
ಸಾನುಕ್ರೋಶಃ ಸರ್ವಸಹೋ ನಿರಾಶೀಃ
ಋಜುಃ ಮೃದುಃ ಅನೃಶಂಸನಃ
ಕ್ಷಮಾವಾನ್ ಸ ವೈ ವಿಪ್ರಃ
ನೇತರಃ ಪಾಪಕರ್ಮಃ
ಕಾಮಕ್ರೋಧ ವಶೋ ಯಸ್ಯ
ತಂ ದೇವಾಃ ಬ್ರಾಹ್ಮಣಂ ವಿದುಃ
ಯಸ್ಯ ಚಾತ್ಮ ಸಮೋ ಲೋಕಃ
ಧರ್ಮಜ್ಞಸ್ಯ ಮನಸ್ವಿನಃ

ವೇದವ್ಯಾಸರು ಎಲ್ಲರಿಗೂ ಇರಬೇಕಾದ ಸಾಮಾನ್ಯ ಗುಣಗಳನ್ನು ಕೆಳಗಿನ ಶ್ಲೋಕಗಳಲ್ಲಿ ಸ್ಪಷ್ಟವಾಗಿ ನಿರೂಪಿಸುತ್ತಾರೆ

ಅಹಿಂಸಾ ಸತ್ಯಮಸ್ತೇಯಂ
ಶೌಚ ಮಿಂದ್ರಿಯ ನಿಗ್ರಹಃ ।
ಏತತ್ ಸಾಮಾನಿಕಂ ಧರ್ಮಂ
ಚಾತುರ್ವರ್ಣ್ಯಂ ಬ್ರವೀನ್ಮಹಂ ॥
ಅಕಾರ್ಪಣ್ಯಂ ಅಸಂರಂಭಂ
ಸಂತೋಷಶ್ಚ ಪ್ರಧಾನತಾ ।
ಅಕ್ರೋಧಂ ಆರ್ಜವಂ ನಿತ್ಯಂ
ನಾತಿವಾದೋಽಭಿಮಾನಿತಾ ॥
ಗುರುಪೂಜಾನಸೂಯಾ ಚ
ದಯಾಭೂತೇಷ್ವಪೈಶುನಂ ।
ಜನವಾದ ಮೃಷಾವಾದ
ಸ್ತುತಿನಿಂದಾ ವಿವರ್ಜನಂ ॥

ಮಹಾಭಾರತದಲ್ಲಿ ಸ್ತ್ರೀಗೆ ವಿಶೇಷ ಗೌರವ ಸಂದಿದೆ. ಅದರಲ್ಲಿ ನೂರಾರು ಪುರುಷ ಪಾತ್ರಗಳಿರುವಂತೆಯೇ ಅನೇಕ ಸ್ತ್ರೀಪಾತ್ರಗಳಿವೆ. ಅವುಗಳಲ್ಲಿ ವಿಶೇಷ ವೈವಿಧ್ಯಗಳಿವೆ. ದೇವತೆಗಳಿದ್ದಾರೆ. ರಾಕ್ಷಸರಿದ್ದಾರೆ, ಮಾನವರಿದ್ದಾರೆ, ಪತಿಯನ್ನು ತಿರಸ್ಕರಿಸಿದವರಿದ್ದಾರೆ. ನೇರವಾಗಿ ವಿವಾಹವಾದವರಿದ್ದಾರೆ, ಗಾಂಧರ್ವ ವಿವಾಹವನ್ನು ಮಾಡಿಕೊಂಡವರೂ ಇದ್ದಾರೆ. ಪತಿಗಾಗಿ ತನ್ನ ಸರ್ವ ಸೌಖ್ಯವನ್ನೂ ಸಂಪೂರ್ಣವಾಗಿ ತ್ಯಾಗಮಾಡಿದವರೂ ಇದ್ದಾರೆ. ಅವರಲ್ಲೆಲ್ಲಾ ದ್ರೌಪದಿ ಪ್ರಧಾನಳಾದವಳು. ಭಾರತವನ್ನು 'ದ್ರೌಪದ್ಯಾಶ್ಚರಿತಂ' ಎಂದೂ ಕರೆಯಬಹುದು, ಭಾರತದ ಪ್ರಧಾನ ವಸ್ತುವೇ ಅವಳಿಗಾದ ಅವಮಾನ ಮತ್ತು ಮಾನ ಸಂರಕ್ಷಣೆ. ಕನ್ನಡದ ಕವಿಕುಲಾಗ್ರಣಿಯಾದ ಪಂಪನು ಪಂಪಭಾರತದಲ್ಲಿ ದ್ರೌಪದಿಯ ವೇಣೀಸಂಹಾರ ಮಾಡಿದಾಗ ಭೀಮನಿಂದ ಆಡಿಸಿದ ಮಾತುಗಳು ಈ ವಿಷಯವನ್ನು ಬಹು ತೀವ್ರವಾಗಿ ಸಿದ್ಧಾಂತ ಪಡಿಸುತ್ತವೆ.

ಇದರೊಳ್ ಶ್ವೇತಾತಪತ್ರ ಸ್ಥಗಿತ
ದಶದಿಶಾಮಂಡಲಂ ರಾಜಚಕ್ರಂ ।
ಪುದಿದಲ್ಕಾಡಿತ್ತದಂಗಿತ್ತಿದರೊಳೆ
ಕುರು ರಾಜಾನ್ವಯಂ ಮತ್ತಮಾಪ ॥
ತ್ತಿದರಿಂದಂ ನೋಡಗುರ್ವೀರ್ವಿದುದಿದುವೆ
ಮಹಾಭಾರತಕ್ಕಾದಿಯಾಯ್ತು ।
ಬ್ಜದಳಾಕ್ಷಿ ಪೇಳ ಸಾಮಾನ್ಯಮೆ
ಬಗೆಯೆ ಭವತ್ಕೇಶ ಪಾಶಪ್ರಪಂಚಂ ॥

ವ್ಯಾಸರ ಪ್ರಕಾರ ಗೃಹಿಣಿಯಿಲ್ಲದ ಮನೆ ಅರಣ್ಯಕ್ಕೆ ಸಮಾನ. ಎಲ್ಲ ವಿಧದಲ್ಲಿಯೂ ಅವಳು ಪತಿಗೆ ಸಹಾಯಕಳು, ಅವಳು ಅನುಕೂಲವಾಗಿದ್ದರೆ ಪುರುಷಾರ್ಥ ಚತುಷ್ಟಯಗಳೂ ಕೈಸೇರಿದಂತೆಯೇ. ಅನುಕೂಲವಾದ ಭಾರ್ಯೆಯನ್ನು ಪಡೆದಿರುವವನು ಸುಕೃತಶಾಲಿ. ಈ ಭಾವವು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟವಾಗಿ ಪ್ರತಿಪಾದಿತವಾಗಿದೆ.

ನ ಗೃಹಂ ಗೃಹಮಿತ್ಯಾಹುಃ
ಗೃಹಿಣೀ ಗೃಹಮುಚ್ಯತೇ ।
ಗೃಹಂ ತು ಗೃಹಿಣೀಹೀನಂ
ಅರಣ್ಯ ಸದೃಶಂ ಮತಂ ॥
ನಾಸ್ತಿ ಭಾರ್ಯಾಸಮೋ ಬಂಧುಃ
ನಾಸ್ತಿ ಭಾರ್ಯಾಸಮೋ ಗತಿಃ ।
ನಾಸ್ತಿ ಭಾರ್ಯಾಸಮೋ ಲೋಕೇ
ಸಹಾಯೋ ಧರ್ಮಸಂಗ್ರಹೇ ॥

ಜೀವನ ದರ್ಶನಕ್ಕಾಗಿ ಭಾರತದಲ್ಲಿ ಅನೇಕ ಸುಭಾಷಿತಗಳಿವೆ. ಬೇರೆ ರೀತಿಯಾಗಿ ಹೇಳುವುದಾದರೆ ಭಾರತವನ್ನು ಸುಭಾಷಿತಗಳ ಗಣಿಯೆಂದೇ ಹೇಳಬಹುದು. ಅವುಗಳೊಂದೊಂದೂ ನಿತ್ಯಸತ್ಯವಾಗಿ ಜೀವನ ನಿರ್ವಹಣಕ್ಕೆ ಬಹು ಸಹಾಯವಾಗುತ್ತವೆ. ಈ ಕೆಳಗಿನ ಕೆಲವು ಶ್ಲೋಕಗಳನ್ನು ನೋಡಬಹುದು

ಶ್ವಃಕಾರ್ಯ ಮದ್ಯ ಕುರ್ವೀತ
ಪೂರ್ವಾಹ್ಣೇ ಚಾಪರಾಹ್ಣಿಕಂ
ಕೋऽಪಿ ತದ್ವೇದ ಯತ್ರಾಸೌ
ಮೃತ್ಯುನಾ ನಾಭಿವೀಕ್ಷಿತಃ

(ನಾಳೆ ಮಾಡಬೇಕಾದುದನ್ನು ಈ ದಿನವೇ ಮಾಡಬೇಕು. ಅಪರಾಹ್ಣದಲ್ಲಿ ಮಾಡಬೇಕಾದುದನ್ನು ಮಧ್ಯಾಹ್ನವೇ ಮಾಡಬೇಕು – ಅಷ್ಟರಲ್ಲಿ ಮೃತ್ಯು ಸಂದರ್ಶನವಾಗುವುದಿಲ್ಲವೆಂದು ಯಾರಿಗೆ ಗೊತ್ತು?)

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | ಪ್ರಾ 7–30 | ಪ್ರಾ 8–00 |
| ಅರ್ಚನ (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | ಪ್ರಾ 8–00 | ಪ್ರಾ 8–30 |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

### ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

### ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | ,, | 40–00 |
| 3. | ಪುಳಿಯೋಗರೆ | ,, | 50–00 |
| 4. | ಪೊಂಗಲು | ,, | 55–00 |
| 5. | ಸಕ್ಕರಪೊಂಗಲ್ | ,, | 55–00 |
| 6. | ಶಾಕರ ಭಾತ್ | ,, | 85–00 |
| 7. | ಕೇಸರೀ ಭಾತ್ | ,, | 90–00 |
| 8. | ಸೀರ | ,, | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಅರ್ಥಾನಾ ಮಾರ್ಜನೇ ದುಃಖಂ
ಅರ್ಜಿತಾ ನಾಂ ಚ ರಕ್ಷಣೇ ।
ನಾಶೇ ದುಃಖಂ ವ್ಯಯೇ ದುಃಖಂ
ಧಿಗರ್ಥಂ ದುಃಖಭಾಜನಂ ॥

(ಹಣವನ್ನು ಸಂಪಾದನೆ ಮಾಡುವಾಗಲೂ ದುಃಖ. ಸಂಪಾದಿಸಿದನ್ನು ರಕ್ಷಣೆಮಾಡುವುದೂ ದುಃಖ. ನಾಶವಾದರೂ ದುಃಖ, ವ್ಯಯವಾದರೂ ದುಃಖ. ಆದುದರಿಂದ ದುಃಖಭಾಜನವಾದ ಈ ಹಣವನ್ನು ಸುಡಬೇಕು)

ಮಾತಾ ಗುರುತರಾ ಭೂಮೇಃ
ಖಾತ್ಪಿತಾ ಚ ಗುರುಸ್ತಥಾ ।
ಮನಃ ಶೀಘ್ರತರಂ ವಾತಾತ್
ಚಿಂತಾಲಘುಕರೀ ತೃಣಾತ್ ॥

(ತಾಯಿ ಭೂಮಿಗಿಂತ ದೊಡ್ಡವಳು. ತಂದೆಯು ಆಕಾಶಕ್ಕಿಂತ ದೊಡ್ಡವನು. ಮನಸ್ಸು ಗಾಳಿಗಿಂತ ವೇಗವಾದುದು. ಚಿಂತೆಯು ಹುಲ್ಲುಕಡ್ಡಿಗಿಂತ ಕೀಳಾದುದು).

ವೇದವ್ಯಾಸರ ರಾಜ್ಯಾಡಳಿತ ವ್ಯವಸ್ಥೆಯೂ ಧರ್ಮಾಧೀನವಾದುದು. ಅದನ್ನು ಅವರು ಶಾಂತಿ ಪರ್ವದ ಒಂದು ಭಾಗವಾದ ರಾಜಧರ್ಮಾನು ಶಾಸನ ಎಂಬ ಉಪಪರ್ವದಲ್ಲಿ ಬಹು ದೀರ್ಘವಾಗಿ ವಿಚಾರಮಾಡಿ ಅದರ ಎಲ್ಲ ಮುಖಗಳನ್ನೂ ಸಮಗ್ರವಾಗಿ ನಿರೂಪಿಸಿದ್ದಾರೆ.

ರಾಜತ್ವವಿದ್ದ ಕಾಲದಲ್ಲಿ ರಾಜನೆಂದರೆ ಅಧಿಕಾರದ ಕೇಂದ್ರಬಿಂದು ಎಂದು ಅರ್ಥವಾಗುತ್ತಿತ್ತು ಈಗ ರಾಜನೆಂದರೆ ಸರಕಾರವನ್ನು ನಡೆಸುವವರು ಎಂದು ಅರ್ಥಮಾಡಬಹುದು. ವೇದವ್ಯಾಸರ ರಾಜ್ಯ ವ್ಯವಸ್ಥೆ ಎಲ್ಲ ಕಾಲಕ್ಕೂ ಹೊಂದಿಕೊಳ್ಳುತ್ತದೆ.

ವೇದವ್ಯಾಸರು ರಾಜ್ಯ ಅಥವಾ ಸರ್ಕಾರದ ಉದಯವು ಹೇಗಾಯಿತು ಎಂಬುದನ್ನು ಅದೇ ಶಾಂತಿ ಪರ್ವದ ೫೯ ನೆಯ ಅಧ್ಯಾಯದಲ್ಲಿ ವಿಚಾರ ಮಾಡಿದ್ದಾರೆ. ಮೊದಲು ಅಂದರೆ ಆದಿಕಾಲದಲ್ಲಿ ಸರಕಾರವೆಂಬುದೇ ಇರಲಿಲ್ಲ, ಏಕೆಂದರೆ "ಉದಾರ ಚರಿತಾನಾಂ ಚ ವಸುಧೈವ ಕುಟುಂಬಕಮ್" ಎಂಬ ನ್ಯಾಯದ ಪ್ರಕಾರ ವಿಶಾಲ ಮನೋಭಾವದವರಿಗೆ ಜಗತ್ತೇ ಅವರ ಮನೆಯಾಗುತ್ತದೆ. ಅಂತಹವರಿಗೆ ಸೀಮಿತವಾದ ರಾಜ್ಯವಿರಲಿಲ್ಲ. ರಾಜ್ಯವಿಲ್ಲದುದರಿಂದ ಅಧಿಕಾರದ ಕೇಂದ್ರ ಬಿಂದುವೂ ಇರಲಿಲ್ಲ. ರಾಜರೂ ಇರಲಿಲ್ಲ. ಹಾಗಾದರೆ ಪ್ರಜಾರಕ್ಷಣೆಯಾಗುತ್ತಿದ್ದುದು ಹೇಗೆ? ಧರ್ಮವೇ ರಕ್ಷಣೆ ಮಾಡುತ್ತಿತ್ತು. ಹಾಗೆಂದರೇನು? ಪ್ರತಿಯೊಬ್ಬ ಪ್ರಜೆಯೂ ತನ್ನ ಇತಿಮಿತಿಯನ್ನರಿತು ಅದರಂತೆ ನಡೆದುಕೊಳ್ಳುವುದು ಇದನ್ನೇ ಧರ್ಮವೆನ್ನುವುದು. ಕರ್ತವ್ಯ ಪ್ರಜ್ಞೆ ಜನಗಳಲ್ಲಿರುವುದಾದರೆ ಕಾನೂನೇಕೆ? ಹಾಗೆ ಕಾನೂನನ್ನು ಅನುಷ್ಠಾನಕ್ಕೆ ತರುವ ಸರ ವೇತಕ್ಕೆ? ವ್ಯಾಸರು ಹೇಳುತ್ತಾರೆ.

ನ ವೈ ರಾಜ್ಯಂ ನ ರಾಜಾಸೀತ್
ನ ದಂಡೋ ನ ಚ ದಾಂಡಿಕಾಃ ।
ಧರ್ಮೇಣೈವ ಪ್ರಜಾಸ್ಸರ್ವಾಃ
ರಕ್ಷಂತಿ ಸ್ಮ ಪರಸ್ಪರಂ ॥

ಅಂದರೆ ಆಕಾಲದಲ್ಲಿ ರಾಜ್ಯವಾಗಲೀ ರಾಜ ಗಲೀ ಇರಲಿಲ್ಲ. ಧರ್ಮದ ಸಹಾಯದಿಂದ ಜ ಪರಸ್ಪರ ಕಾಪಾಡಿಕೊಳುತ್ತಿದ್ದರು. ಹಾಗಾ ಅವರಿಗೆ ಸರ್ಕಾರದ ಅವಶ್ಯಕತೆ ಬಂದದ್ದು ಹೇ ಕಾಲಕಳೆದಂತೆಲ್ಲಾ ಜನರಲ್ಲಿ ಕರ್ತವ್ಯ ಪ್ರ ಕುಸಿಯ ತೊಡಗಿತು. ತಿಳುವಳಿಕೆ ಹಾಳಾಯಿ ಜನತೆಯಲ್ಲಿ ಧಾರ್ಮಿಕ ಭಾವನೆ ನಷ್ಟವಾಯಿ ಜನರು ಅರಿಷಡ್ವರ್ಗಗಳಿಗೆ ಈಡಾಗಿ ಸ್ವಾ ದೃಷ್ಟಿಯಿಂದ ಇತರರಿಗಾಗುವ ಹಿಂಸೆಯ ನೋಡದಾದರು. ಪ್ರಜಾವರ್ಗದ ಸೌಖ್ಯ ಏ ಪೇರಾಯಿತು. ಆದಕ್ಕಾಗಿ ಕಾನೂನು ಪಾ ಗಾಗಿ ಸೂಕ್ತ ಏರ್ಪಾಡನ್ನು ಮಾಡಬೇಕೆಂ ಪ್ರಜೆಗಳು ಭಗವಂತನಲ್ಲಿ ಮೊರೆಯಿಟ್ಟರು. ಅ ಆಜ್ಞೆಯ ಪ್ರಕಾರ ಲೋಕಕ್ಷೇಮಕ್ಕಾಗಿ ಬ್ರಹ್ಮ ವಿಸ್ತಾರವಾದ ದಂಡನೀತಿಶಾಸ್ತ್ರವನ ನಿರ್ಮಿಸಿದನು. ಅದೇ ಕಾಲಾನುಕಾ ದಲ್ಲಿ ಸಂಗ್ರಹವಾಗಿ ವ್ಯಾಸರ ಕಾಲದವರೆಗ ಬೆಳೆದು ಬಂದಿತು. ಅದರಂತೆ ನಡೆಯುವು ಧರ್ಮಪರಿಪಾಲನೆಯೆಂಬುವುದು ಲೋಕದಲ್ಲಿ ಸಿದ್ಧಾಂತವಾಯ್ತು.

ಆದರ ಪ್ರಕಾರ ರಾಜಧರ್ಮವು ಇತರ ಧರ್ಮ ಗಳನ್ನೆಲ್ಲಾ ರಕ್ಷಿಸುವುದರಿಂದ ಅದು ಬಹುಶ್ರೇ ವಾದುದು. ರಾಜನಿಲ್ಲದಿದ್ದರೆ ರಾಜ್ಯವು ಅರಾಜ ವಾಗುತ್ತದೆ. ಅರಾಜಕತ್ವದಿಂದ ನಾನಾ ವಿ ವಾದ ಪ್ರಜಾಕ್ಷೋಭೆಯುಂಟಾಗುತ್ತದೆ. ಯಾ ಪ್ರಜೆಯೂ ಸುಖವಾಗಿರಲು ಸಾಧ್ಯವಾಗು ದಿಲ್ಲ. ಕರ್ತವ್ಯವಾದ ಅನೇಕ ಧರ್ಮ ಕಾರ್ಯಗಳ ನಡೆಯಲು ಸಾಧ್ಯವಾಗುವುದಿಲ್ಲ, ಆದುದರಿಂದಲೆ ರಾಷ್ಟ್ರದ ಸರ್ವವಿಧವಾದ ಧರ್ಮ ರಕ್ಷಣೆಗೆ ರಾ ಅಥವಾ ಸರ್ಕಾರ ಇದ್ದೇ ಇರಬೇಕು. ಆ ರಾಜನಿ ಅನೇಕ ಗುಣಗಳಿರುವುದು ಅವಶ್ಯಕ. ಅಶಕ್ತನಾ ರುವವನು ಎಂದೂ ರಾಜನಾಗಲಾರ. ರಾಷ್ಟ್ರವನ್ನು ರಕ್ಷಿಸಲು ಅವನಿಗೆ ಸಾಧ್ಯವೂ ಆಗುವುದಿಲ್ಲ. ಅ ಕ್ತನಾದ ರಾಜನನ್ನು ಪ್ರಜೆಗಳು ಅಧಿಕಾರದಿಂ ವಜಾ ಮಾಡಲು ಶಕ್ತರಾಗಿರುತ್ತಾರೆ. ರಾಷ್ಟ್ರ ಮತ್ತು ಪ್ರಜೆಯ ಕ್ಷೇಮವನ್ನು ಸಂರಕ್ಷಿಸುವುದೇ ಅವನ ಕರ್ತವ್ಯ. ಆದಕ್ಕಾಗಿ ಅವನು ಪ್ರಜೆಗಳಿಗೆ

(35ನೇ ಪುಟ ನೋಡಿ)

# ರಮಣ ಮಹರ್ಷಿ

30 – 12 – 1879 ಪ್ರಮಾಧಿನಾಮ ಸಂವತ್ಸರದ ಮಾರ್ಗಶಿರ ಬಹುಳ ಪಾಡ್ಯ ಸೋಮವಾರ. ಮಧುರೆಗೆ ಮುವತ್ತು ಮೈಲಿ ದೂರದಲ್ಲಿರುವ ತಿರುಚ್ಚುಳಿ ಗ್ರಾಮದಲ್ಲಿ ಸುಂದರಂ ಐಯ್ಯರ್, ಅಲಗಮ್ಮಾಳ್ ಈ ದಂಪತಿಗಳಿಗೆ ಗಂಡು ಮಗುವಿನ ಜನನವಾಯಿತು. ಮಗುವಿಗೆ ವೆಂಕಟರಮಣ ಎಂದು ನಾಮಕರಣ ಮಾಡಿದರು. ತಂದೆ-ತಾಯಿಗಳಿಬ್ಬರೂ ಸುಶೀಲರೂ, ಸದ್ಗುಣವಂತರೂ ಆಗಿದ್ದರು. ತಂದೆ ವಕೀಲವೃತ್ತಿಯನ್ನು ನಡೆಸಿ ತಕ್ಕಮಟ್ಟಿಗೆ ಹಣ ಸಂಪಾದಿಸಿ ಅನುಕೂಲವಾದ ಜೀವನವನ್ನೇ ನಡೆಸಿದ್ದರು. ಆದರೆ ಹಣ ಕೀರ್ತಿಗಳಿಗಾಗಿ ಎಂದೂ ಆಶಿಸಿದವರಲ್ಲ. ತಮಗೆ ದೊರೆತದ್ದರಲ್ಲಿ ಸ್ವಲ್ಪವನ್ನು ದೀನದಲಿತರಿಗೆ ದಾನ ಮಾಡಿಬಿಡುತ್ತಿದ್ದರು. ತಾಯಿ ಅಲಗಮ್ಮನವರು ಪತಿಭಕ್ತಿ, ದೈವಭಕ್ತಿ, ದಯೆ ಈ ಗುಣಗಳಿಂದ ಕೂಡಿದವರಾಗಿದ್ದರು. ತಂದೆ ತಾಯಿಗಳ ಈ ಗುಣ ಸ್ವಭಾವಗಳು ಬಾಲಕ ವೆಂಕಟರಮಣನ ಮನಸ್ಸಿನ ಮೇಲೂ ಒಳ್ಳೆಯ ಪರಿಣಾಮವನ್ನೇ ಬೀರಿದವು.

ವೆಂಕಟರಮಣನ ವಿದ್ಯಾಭ್ಯಾಸ ಮಧುರೆಯಲ್ಲಿದ್ದ ಚಿಕ್ಕಪ್ಪನ ಆಶ್ರಯದಲ್ಲಿ ನಡೆಯಿತು. ಆದರೆ ಬಾಲಕನಿಗೆ ಓದಿನಲ್ಲಿ ಹೆಚ್ಚು ಆಸಕ್ತಿ ಮೂಡಲಿಲ್ಲ. ಹುಡುಗನ ಮನಸ್ಸೆಲ್ಲ ದೇವರಲ್ಲಿ ಲೀನವಾಗಿ ಹೋಗಿತ್ತು. ರಮಣರೇ ಈ ಸಂಗತಿಯನ್ನು ಕುರಿತು ಹೀಗೆ ಹೇಳಿಕೊಂಡಿದ್ದಾರೆ. "ತುಲಸೀದಾಸರಿಗೆ ಹರಿಪ್ರೇಮದ ಹುಚ್ಚು ಹಿಡಿದಂತೆ ನನಗೆ ಭಗವಂತನ ಹುಚ್ಚು ಹಿಡಿದಿತ್ತು. ಕೈಯಲ್ಲಿ ಪುಸ್ತಕವನ್ನು ಹಿಡಿದಿದ್ದರೂ ಯಾವ ಕ್ಷಣದಲ್ಲಿ ಯಾದರೂ ಆಕಾಶದಿಂದ ಭಗವಂತನನ್ನೆದುರು ಕಾಣಿಸಿಕೊಳ್ಳಬಹುದೆಂದು ಕುತೂಹಲದಿಂದ ನಾನು ಆಕಾಶವನ್ನೇ ನೋಡುತ್ತಿದ್ದೆ". ಇಂತಹ ದಿವ್ಯಹುಚ್ಚಿನ ಬಾಲಕನಿಗೆ ಓದಿನಲ್ಲಿ ಹೇಗೆ ಆಸಕ್ತಿ ಹುಟ್ಟೀತು! ಆದರೆ ಬಾಲಕನಿಗೆ ಆಟಗಳಲ್ಲಿ ಹೆಚ್ಚಿನ ಆಸಕ್ತಿ ಇದ್ದಿತು. ಅಗಾಧ ನೆನಪಿನ ಶಕ್ತಿ ಬಾಲಕನ ವಿಶಿಷ್ಟಗುಣವಾಗಿತ್ತು.

ವೆಂಕಟರಮಣನಿಗೆ ತನ್ನ ಹದಿನಾರನೇ ವಯಸ್ಸಿನಲ್ಲಿ ಆಕಸ್ಮಿಕವಾಗಿ ಅರುಣಾಚಲದ ಬಗ್ಗೆ ವಿಶೇಷವಾದ ಭಕ್ತಿ ಹೆಚ್ಚಿತು. ಅರುಣಾಚಲದ ಹೆಸರು ಕೇಳಿದೊಡನೆಯೆ ಭಾವೋದ್ವೇಗದಿಂದ ಅವರ ಮೈ ಪುಳಕಿತವಾಗುತ್ತಿತ್ತು. ಶಿವಭಕ್ತರ ಮಹಿಮೆಯನ್ನು ವರ್ಣಿಸುವ ಪೆರಿಯಪುರಾಣವನ್ನು ಓದಿ ದೇವರಲ್ಲಿ ತಮ್ಮನ್ನು ಅರ್ಪಿಸಿಕೊಳ್ಳುವ ಭಕ್ತಿಯೋಗವನ್ನು ಸಾಧಿಸಲು ನಿರ್ಧರಿಸಿದರು.

ಹದಿನೇಳನೆಯ ವಯಸ್ಸಿನಲ್ಲಿ ನಡೆದ ಒಂದು ಘಟನೆಯಿಂದ ಅವರು ಮೃತ್ಯುಭಯದಿಂದ ಮುಕ್ತರಾಗಿ ಆತ್ಮದ ಅರಿವನ್ನು ಪಡೆದು ಕಾಳಿಕೆಯನ್ನು ಕಳೆದುಕೊಂಡ ಶುದ್ಧ ಚಿನ್ನದಂತೆ, ತೇಜೋಮಯವಾದ ನಕ್ಷತ್ರದಂತೆ ಪ್ರಕಾಶಿಸಿದರು.



ಒಂದು ದಿನ ಇದ್ದಕ್ಕಿದ್ದಂತೆಯೆ ಅವರ ಮನಸ್ಸಿನಲ್ಲಿ ತಾನು ಈ ಕ್ಷಣದಲ್ಲಿ ಸಾಯುತ್ತೇನೆ ಎಂಬ ಭಾವನೆ ಹುಟ್ಟಿತು. ಆದರೆ ಸಾವಿನ ಅಂಜಿಕೆ ಹುಟ್ಟಲಿಲ್ಲ. ಕಾಲುಗಳನ್ನು ಚಾಚಿ ಉದ್ದಕ್ಕೆ ಮಲಗಿದರು. ಸಾವಿನ ಬಗ್ಗೆ ವಿಚಾರ ಮಾಡತೊಡಗಿದರು. 'ಸಾವು ಎಂದರೇನು ? ಸಾವು ಬಂದರೆ ಈ ದೇಹ ಸಾಯುತ್ತದೆ. ಆದರೆ ಈ ದೇಹದೊಳಗಿನ ನನ್ನ ವ್ಯಕ್ತಿತ್ವ ಅದೇ ಚೈತನ್ಯದಿಂದ ರಭಸದಿಂದ ಹರಿಯುತ್ತಿದೆ. ಈ ದೇಹ ಸತ್ತರೂ ಸಹ ಅದರೊಳಗಿರುವ ಆತ್ಮ ಅವಿನಾಶಿಯಾದದ್ದು.' ಇಷ್ಟೆಲ್ಲ ವಿಚಾರಗಳು ಆ ಕ್ಷಣದಲ್ಲಿ ಅವರ ಮನಸ್ಸಿಗೆ ಹೊಳೆಯಿತು. ಇಂದ್ರಿಯ, ಪ್ರಾಣ, ಮನಸ್ಸು ಇವೆಲ್ಲವುಗಳಿಂದ ಹೊರತಾದದ್ದು ಆತ್ಮ ಎಂಬ ಅರಿವುಂಟಾಯಿತು. ಯಾವಾಗ ಅವರಲ್ಲಿ ಈ ತಿಳುವಳಿಕೆ ಮೂಡಿತೋ ಆಗಲೇ ಅವರಲ್ಲಿದ್ದ ಅಜ್ಞಾನ ಅಹಂಕಾರಗಳೆಂಬ ಕತ್ತಲು ಕಳೆದು ಜ್ಞಾನವೆಂಬ ಜ್ಯೋತಿ ಬೆಳಗಿತು. ಆ ದಿವ್ಯ ಪ್ರಭೆಯ ಹೊಳಹಿನಲ್ಲಿ ವೆಂಕಟರಮಣರು ಪೂರ್ಣವಾಗಿ ಅರಳಿದ ದೇವಲೋಕದ ಕುಸುಮದಂತೆ ಕಂಗೊಳಿಸಿದರು.

ಆತ್ಮಸ್ವರೂಪದ ಅರಿವು ಮೂಡಿದಮೇಲೆ ಮೊದಲೇ ಮೌನಿಯಾಗಿದ್ದ ವೆಂಕಟರಮಣರನ್ನು ಮತ್ತಷ್ಟು ಮೌನ ಆವರಿಸಿತು. ಸದಾ ಏಕಾಂಗಿಯಾಗಿ ಏಕಾಗ್ರ ಚಿತ್ತದಿಂದ ಧ್ಯಾನಯೋಗದಲ್ಲಿ ಲೀನವಾಗುತ್ತಿದ್ದರು. ದೇವರ ಎದುರಿನಲ್ಲಿ ನಿಂತೊಡನೆಯೆ ಅವರ ಕಣ್ಣುಗಳಿಂದ ಆನಂದಭಾಷ್ಪಗಳು ಧಾರಾಕಾರವಾಗಿ ಸುರಿಯುತ್ತಿದ್ದವು. ಅವರ ದೇಹದ ಕಣಕಣವೂ ಭಕ್ತಿಭಾವದಲ್ಲಿ ಮಿಂದು ಅಲೌಕಿಕವಾದ ಆನಂದವನ್ನು ಅನುಭವಿಸುತ್ತಿದ್ದವು. ದಿನಗಳೆಂದಂತೆ ಅರುಣಾಚಲ ಅವರನ್ನು ಕೈಬೀಸಿ ಕರೆಯುತ್ತಿರುವಂತೆ ಭಾಸವಾಗುತ್ತಿತ್ತು ; ಜೊತೆಗೆ ತಮ್ಮ ಧ್ಯಾನಾಸಕ್ತಿಯನ್ನು ಲಘುವಾಗಿ ಕಂಡ ಅಣ್ಣನ "ಯೋಗಿಯಾಗಬೇಕಿದ್ದರೆ ಕಾಡಿಗೆ ಹೋಗು"......ಎನ್ನುವ ಮೂದಲಿಕೆಯ ಮಾತು ನಿಜವೆನಿಸಿತು. ಒಂದು ದಿನ ಯಾರಿಗೂ ಹೇಳದೆ ಪತ್ರವನ್ನು ಬರೆದಿಟ್ಟು ಮನೆಬಿಟ್ಟು ಹೊರಟುಬಿಟ್ಟರು. ಕೈಯಲ್ಲಿದ್ದ ಅಲ್ಪ ಸ್ವಲ್ಪ ಹಣದಿಂದ ಕೆಲದಾರಿಯನ್ನು ರೈಲಿನಿಂದಲೂ ಮತ್ತಷ್ಟು ದಾರಿಯನ್ನು ಕಾಲುನಡಿಗೆಯಿಂದಲೂ ಕ್ರಮಿಸಿ ಒಂದು ಪ್ರಾತಃಕಾಲ ತಿರುವಣ್ಣಾಮಲೆಯನ್ನು ತಲುಪಿದರು. ಅರುಣಾಚಲ ತಲುಪಿದೊಡನೆ ಅವರು ಆನಂದಾತಿರೇಕದಿಂದ ಓಡೋಡಿ ಬಂದು ಅರುಣಾಚಲೇಶ್ವರನ ದೇವಾಲಯ

ಶ್ರೀ ಚಿ. ನಂ. ಕೃಷ್ಣಮೂರ್ತಿ

ಡೊಳಕ್ಕೆ ಪ್ರವೇಶಿಸಿದರು. ಆ ಸಮಯ ದಲ್ಲಿ ದೇವಾಲಯದಲ್ಲಿ ಯಾರೂ ಇರಲಿಲ್ಲ. ವೆಂಕಟರಮಣರು ಗರ್ಭಗುಡಿಯನ್ನು ಪ್ರವೇಶಿಸಿ ಜಗತ್ ರಕ್ಷಕನೂ ಮಹಾ ಮಹಿಮನೂ ಆದ ಆ ಸ್ವಾಮಿಯೆದುರು ಕೈ ಜೋಡಿಸಿ ನಿಂತು ತಮ್ಮ ಇಷ್ಟದೇವರನ್ನು ಕಣ್ತುಂಬಾ ನೋಡಿ ಆನಂದಿಸಿದರು. ಅವರ ಮೈಮನಸ್ಸು ಹೃದಯಗಳು ಭಕ್ತಿ ಭಾವ ದಲ್ಲಿ ಮಿಂದು ಪುನೀತವಾಗಿತ್ತು.

ರಮಣರ ತಪೋಜೀವನ ತಿರುವಣ್ಣಾ-ಮಲೈಯಲ್ಲೇ ಪ್ರಾರಂಭವಾಯಿತು. ದೇವಾಲಯದ ಮಹಾಮಂಟಪದಲ್ಲಿಯೆ ರಮಣರು ಧ್ಯಾನಸ್ಥರಾಗಿ ಕುಳಿತುಕೊಳ್ಳುತ್ತಿದ್ದರು. ಆದರೆ ತುಂಟ ಹುಡುಗರು ಅವರಿಗೆ ತೊಂದರೆ ಕೊಡುತ್ತಿದ್ದರಿಂದ ಅವರು ತಮ್ಮ ಸ್ಥಳವನ್ನು ಬದಲಾಯಿಸಿ ಪಾತಾಳ ಲಿಂಗಮ್ ಎಂಬ ಸಣ್ಣ ಗುಡಿಯನ್ನು ಪ್ರವೇಶಿಸಿದರು. ಅದು ನೆಲದ ತಳದಲ್ಲಿದ್ದು ಕತ್ತಲು ತುಂಬಿದ ಕ್ರಿಮಿಕೀಟಗಳಿಂದ ಕೂಡಿದ್ದು ಅನಾರೋಗ್ಯಕರವಾದ ಸ್ಥಳವಾಗಿತ್ತು. ಆದರೆ ರಮಣರು ಅದಾವುದನ್ನೂ ಲಕ್ಷಿಸದೆ ಅಲ್ಲಿಯೇ ಧ್ಯಾನಾಸಕ್ತರಾಗಿ ಅನೇಕ ದಿನಗಳವರೆಗೆ ಕುಳಿತುಬಿಡುತ್ತಿದ್ದರು. ಆಗ ಶೇಷಾದ್ರಿ ಸ್ವಾಮಿಗಳೆಂಬುವರು ಅವರನ್ನು ಆ ಕತ್ತಲು ಕೋಣೆಯಿಂದ ಹೊರತಂದು ರಕ್ಷಿಸಿದರು. ಮುಂದೆ ರಮಣರು ಸುಬ್ರಹ್ಮಣ್ಯದೇವಾಲಯ ದಲ್ಲಿ ಬೀಡು ಬಿಟ್ಟರು. ಅಲ್ಲಿ ರಮಣರನ್ನು ಅವರ ಭಕ್ತರು ಉಪಚರಿಸಿದರು. ಕಾಲ ಕಳೆದಂತೆ ರಮಣರ ಭಕ್ತಿಜ್ಞಾನ ಯೋಗ ಗಳು ಸುತ್ತಮುತ್ತಲೂ ಹಬ್ಬಿತು. ಅವರ ಭಕ್ತರ ಸಂಖ್ಯೆ ಹೆಚ್ಚಿತು. ಆದರೂ ರಮಣರು ಮೌನವ್ರತಧಾರಿಗಳಾಗಿಯೇ ಇದ್ದರು. ಒಮ್ಮೊಮ್ಮೆ ಅವರ ಭಕ್ತರಲ್ಲಿ ಕೆಲವರಾದ ಪಳನೀಸ್ವಾಮಿ ಮೊದಲಾದವರು ಯೋಗವಾಸಿಷ್ಠ, ಕೈವಲ್ಯ ನವನೀತ ಮೊದಲಾದ ಗ್ರಂಥಗಳನ್ನು ತಂದು ತಮಗೆ ಅರ್ಥವಾಗದ ಸಂಗತಿಗಳನ್ನು ಕೇಳುತ್ತಿದ್ದರು. ಆಗ ರಮಣರು ಅವುಗಳ ಅರ್ಥವನ್ನು ಬರೆದು ತಿಳಿಸುತ್ತಿದ್ದರು.

ರಮಣರ ಚಿಕ್ಕಪ್ಪಂದಿರಲ್ಲಿ ಒಬ್ಬರಾದ ನೆಲ್ಲಿಯಪ್ಪ ಐಯ್ಯರ್ ಅವರಿಗೆ ವೆಂಕಟರಮಣ ತಿರುವಣ್ಣಾಮಲೆಯಲ್ಲಿ ಸನ್ಯಾಸಿಯಾಗಿದ್ದಾನೆ ಎಂಬ ವಿಚಾರ ತಿಳಿದು ಅವರು ತಿರುವಣ್ಣಾಮಲೆಗೆ ಬಂದು ರಮಣರನ್ನು ಕರೆದೊಯ್ಯಲು ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನ ಫಲಿಸದೆ ನಿರಾಶರಾಗಿ ಹಿಂದಿರುಗಿ ರಮಣರ ತಾಯಿಯಾದ ಅಲಗಮ್ಮಾಳಿಗೆ ಈ ವಿಚಾರ ವನ್ನು ತಿಳಿಸಿದರು. ಹೆತ್ತ ಒಡಲಿಗೆ ಕಣ್ಮರೆ ಯಾದ ಮಗನ ಸುದ್ದಿ ತಿಳಿದಾಗ ಆದ ಆನಂದ ಅಷ್ಟಿಷ್ಟಲ್ಲ. ಅಲಗಮ್ಮಾಳ್ ಕೂಡಲೆ ಅರುಣಾಚಲಕ್ಕೆ ಬಂದರು. ಮಗನನ್ನು ಕಂಡು ತಮ್ಮೊಡನೆ ಬರಬೇಕೆಂದು ಹೇಳಿದರು. ತಾಯಿಯ ಕಣ್ಣಿನಲ್ಲಿ ನೀರು ಕೋಡಿ

ಹರಿಯಿತು. ಆದರೆ ಮಗನ ನಿರ್ಧಾರ ಬದಲಾಗಲಿಲ್ಲ. ತನ್ನ ಅಭಿಪ್ರಾಯವನ್ನು ಸಣ್ಣ ಕಾಗದದಲ್ಲಿ ಬರೆದರು. "ನಾವು ಮಾಡಿದ ಹಿಂದಿನ ಕರ್ಮಗಳಿಗೆ ಅನುಸಾರವಾಗಿ ನಮ್ಮ ಹಣೇಬರಹ ನಿರ್ಧಾರವಾಗಿರುತ್ತದೆ. ವಿಧಿಯ ತೀರ್ಮಾನದಂತೆ ಪ್ರತಿ ಕೆಲಸವೂ ನಡೆಯುತ್ತದೆ. ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಈ ಬಗ್ಗೆ ಮೌನವಾಗಿರುವುದೇ ಲೇಸು". ಅಲಗಮ್ಮನವರು ಮಗನ ನಿರ್ಧಾರವನ್ನು ಬದಲಿಸಲಾರದೆ ಮಧುರೆಗೆ ಹಿಂತಿರುಗಿದರು.

ಶ್ರೀ ಗಣಪತಿಮುನಿಗಳೆಂಬುವರು ಸಂಸ್ಕೃತದಲ್ಲಿ ಮಹಾವಿದ್ವಾಂಸರಾಗಿದ್ದರು. ಸ್ವತಃ ಕವಿಗಳಾಗಿದ್ದರು. ಅವರನ್ನು ಕಾವ್ಯಕಂಠ ಗಣಪತಿಮುನಿಗಳೆಂದೇ ಕರೆಯುತ್ತಿದ್ದರು. ಒಮ್ಮೆ ಅವರು ರಮಣರನ್ನು ಕಾಣಲು ಅರುಣಾಚಲಕ್ಕೆ ಬಂದರು. ರಮಣರನ್ನು ಕಂಡೊಡನೆಯೆ ಅವರಿಗೆ ದಿವ್ಯತೇಜಸ್ಸನ್ನು ಕಂಡಂತೆ ಅನುಭವವಾಯಿತು. ಅವರು ಭಗವಾನರಿಗೆ ನಮಸ್ಕರಿಸಿ ಅವರ ಪಾದಗಳನ್ನು ಹಿಡಿದು ತಮ್ಮ ಅಂತರಂಗದ ಅಭೀಪ್ಸೆಯನ್ನು ತಳಮಳವನ್ನು ನಿವೇದಿಸಿದರು. "ನಾನು ಸಕಲ ವೇದಾಂತ, ಪುರಾಣ, ಉಪನಿಷತ್ತುಗಳನ್ನು ಅಧ್ಯಯನ ಮಾಡಿದೆ. ಶ್ರದ್ಧಾಭಕ್ತಿಯಿಂದ ಜಪ, ತಪಗಳನ್ನು ನಡೆಸಿದೆ. ಹಲವಾರು ನೇಮಗಳನ್ನು ಆಚರಿಸಿದೆ. ಆದರೆ ನಿಜವಾದ ತಪಸ್ಸಿನ ಅರ್ಥ ನನಗೆ ಹೊಳೆಯಲಿಲ್ಲ. ತಪಸ್ಸಿನ ಸ್ವರೂಪವನ್ನು ನನಗೆ ತಿಳಿಸಬೇಕು. ನಿಮ್ಮ ಚರಣಗಳಿಗೆ ನಾನು ಶರಣಾಗಿದ್ದೇನೆ. ನನ್ನನ್ನು ಉದ್ಧರಿಸಬೇಕು" ಎಂದು ಕೋರಿದರು. ಆಗ ರಮಣರು "ನಾನು ಎನ್ನುವ ಭಾವ ಎಲ್ಲಿಂದ ಹುಟ್ಟುತ್ತದೆಯೋ ಅದನ್ನೇ ಗಮನವಿಟ್ಟು ನಿರೀಕ್ಷಿಸುತ್ತಿದ್ದರೆ ಮನಸ್ಸು ಅಲ್ಲಿಯೆ ಲೀನವಾಗುತ್ತದೆ. ಅದೇ ತಪಸ್ಸು. ಮಂತ್ರವೊಂದನ್ನು ಉಚ್ಚರಿಸುವಾಗ ಆ ಶಬ್ದ ಎಲ್ಲಿಂದ ಬರುತ್ತದೆ ಎಂಬುದನ್ನು ನಿರೀಕ್ಷಿಸುತ್ತ ಅದರಲ್ಲಿಯೆ ಮನಸ್ಸನ್ನು ಕೇಂದ್ರೀಕರಿಸಿದರೆ ಅದೇ ತಪಸ್ಸು" ಎಂದರು. ರಮಣರ ಈ ಮಾತುಗಳು ಗಣಪತಿ ಮುನಿಗಳಿಗೆ ಸಂಪೂರ್ಣ ಸಮಾಧಾನವನ್ನು ತಂದಿದ್ದಲ್ಲದೆ ಹೊಯ್ದಾಟದಲ್ಲಿ ಸಿಲುಕಿದ ಮನಸ್ಸು ಶಾಂತಿಯ ನಿಲುಗಡೆಗೆ ಬಂದಿತು. ಅವರು ರಮಣರನ್ನು 'ಭಗವಾನ್ ಶ್ರೀ ರಮಣ ಮಹರ್ಷಿ' ಎಂದು ಕರೆದರು. ಅಂದಿನಿಂದ ರಮಣರು ಅದೇ ಹೆಸರಿನಿಂದ ಪರಿಚಿತರಾದರು. ಮುಂದೆ ಗಣಪತಿಮುನಿಗಳು ರಮಣ ಮಹರ್ಷಿಗಳ ಮಹಿಮೆಯನ್ನು ಬಣ್ಣಿಸುವ ಸ್ತೋತ್ರ ಪದ್ಯಗಳನ್ನು ಸಂಸ್ಕೃತದಲ್ಲಿ ರಚಿಸಿದರು. ಮಹರ್ಷಿಗಳ ಉಪದೇಶವನ್ನು ವಿವರಿಸುವ 'ರಮಣಗೀತ' ಎಂಬ ಕೃತಿಯನ್ನು ರಚಿಸಿದರು.

ರಮಣಮಹರ್ಷಿಗಳು ಅಸಾಮಾನ್ಯವಾದ ಭೂತದಯಾಪರತೆಯನ್ನು ಹೊಂದಿದ್ದರು. ಅವರ ಆಶ್ರಮದಲ್ಲಿ ನಾಯಿ, ಹಸು, ಬೆಕ್ಕು, ಮಂಗಗಳು ಆಶ್ರಯ ಪಡೆದಿದ್ದವು. ಅಷ್ಟೇ ಅಲ್ಲದೆ ಮನುಷ್ಯರನ್ನು ಪ್ರಾಣಿಗಳನ್ನು ಯಾವ ಪಕ್ಷಪಾತವೂ ಇಲ್ಲದೆ ನೋಡಿಕೊಳ್ಳುವುದು ಆಶ್ರಮಧರ್ಮವೇ ಆಗಿಬಿಟ್ಟಿತ್ತು. 'ಲಕ್ಷ್ಮಿ' ಎಂಬ ಹಸುವನ್ನು ಮಹರ್ಷಿಗಳು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಆ ಹಸುವು ಆಶ್ರಮಕ್ಕೆ ಬಂದ ವೇಳೆಯಲ್ಲಿ ಒಂದು ಗೋಶಾಲೆಯ ನಿರ್ಮಾಣವಾಯಿತು. ಲಕ್ಷ್ಮಿ ತೀರಿಕೊಂಡ ಮೇಲೆ ಅದರ ಶಿಲಾಪ್ರತಿಮೆಯನ್ನು ಮಾಡಿ ಆಶ್ರಮದಲ್ಲಿ ಇಡಲಾಗಿದೆ. ಮಹರ್ಷಿಗಳು ಸ್ವತಃ ರಚಿಸಿದ ಚರಮಗೀತೆಯನ್ನು ಅಲ್ಲಿ ಕೆತ್ತಿದೆ.

ರಮಣಮಹರ್ಷಿಗಳ ತತ್ತ್ವಜ್ಞಾನವನ್ನು ವಿವರಿಸುವ ಪ್ರಮುಖ ಗ್ರಂಥಗಳೆಂದರೆ, ನರಸಿಂಹಸ್ವಾಮಿ ಎಂಬುವರು ರಮಣಾಶ್ರಮದಲ್ಲಿ ಬಹಳಕಾಲ ಇದ್ದು ಮಹರ್ಷಿಗಳ ಜೀವನ ಚರಿತ್ರೆಯನ್ನು 'ಆತ್ಮಸಾಕ್ಷಾತ್ಕಾರ' ಎಂಬ ಹೆಸರಿನಲ್ಲಿ ಬರೆದಿದ್ದಾರೆ. ಕಪಾಲ ಶಾಸ್ತ್ರಿಗಳ 'ಸದ್ದರ್ಶನ ಭಾಷ್ಯ ಮತ್ತು 'ಮಹರ್ಷಿಗಳೊಡನೆ ಸಂಭಾಷಣೆ'ಎಂಬ ಕೃತಿಗಳಲ್ಲಿ ಮಹರ್ಷಿಗಳ ಆಧ್ಯಾತ್ಮಿಕ ವಿಚಾರಧಾರೆಯನ್ನು ಕಾಣಬಹುದು. ಮತ್ತೊಂದು ಕೃತಿ ಹಾಲ್ ಬ್ರಂಟನ್ ಅವರ 'ಗುಪ್ತಭಾರತ ಶೋಧ' ಎಂಬ ಗ್ರಂಥ. ಈ ಕೃತಿಯಲ್ಲಿ ಮಹರ್ಷಿಗಳ ಜೀವನ ವೃತ್ತಾಂತ ಮತ್ತು ಉಪದೇಶಗಳನ್ನು ವಿವರಿಸಿದೆ.

• ರಮಣಮಹರ್ಷಿಗಳು ಸ್ವತಃ ಕೆಲವು ಅಮೂಲ್ಯ ಕೃತಿಗಳನ್ನು ರಚಿಸಿದ್ದಾರೆ. 'ಜೀವನವನ್ನು ಕುರಿತು ನಲವತ್ತು ಪದ್ಯಗಳು' ಎಂಬುದು ಅವರ ಶ್ರೇಷ್ಠ ಕೃತಿ. 'ಉಪದೇಶಸಾರ' ಎಂಬ ಪದ್ಯರೂಪದ ಕೃತಿಯಲ್ಲಿ ವೇದಾಂತ ವಿಚಾರಗಳನ್ನು ಹೇಳಿದ್ದಾರೆ. ಶಂಕರಾಚಾರ್ಯರ ವಿವೇಕಚೂಡಾಮಣಿ ಮತ್ತು ಆತ್ಮಬೋಧ ಕೃತಿಗಳನ್ನು ತಮಿಳಿಗೆ ಅನುವಾದ ಮಾಡಿದ್ದಾರೆ.

ರಮಣಮಹರ್ಷಿಗಳ ತತ್ತ್ವಗಳಲ್ಲಿ ಮುಖ್ಯವಾಗಿ ಆತ್ಮಶೋಧನೆಯನ್ನು ಕಾಣುತ್ತೇವೆ. ಜ್ಞಾನವೆಂಬ ಬೆಂಕಿಯಲ್ಲಿ ಅಹಂಕಾರವನ್ನು ದಹಿಸುವುದೇ ನಿಜವಾದ ಯಜ್ಞ. 'ನಾನು ಯಾರಾಗಿದ್ದೇನೆ?' ಎಂಬ ಆತ್ಮಶೋಧನೆ ಮಾಯವಾಗಿ ಆತ್ಮವು ತನ್ನ ಸಂಪೂರ್ಣ ತೇಜಸ್ಸಿನಿಂದ ಪ್ರಕಾಶಿಸುವುದು. ಆ ಪ್ರಕಾಶನೇ ಆತ್ಮಸಾಕ್ಷಾತ್ಕಾರ.

ರಮಣರನ್ನು ಕಾಣಲು ಬಂದ ದರ್ಶಕರೊಬ್ಬರು ಅವರನ್ನು ಹೀಗೆ ಪ್ರಶ್ನಿಸಿದರು. "ನಾನು ನನ್ನ ವ್ಯವಹಾರವನ್ನು ಬಿಟ್ಟು ವೇದಾಂತ ಗ್ರಂಥಗಳನ್ನು ಅಭ್ಯಾಸ ಮಾಡಲೆ?" ಅದಕ್ಕೆ ರಮಣರು ಕೊಟ್ಟ ಉತ್ತರ "ಲೋಕ ವ್ಯವಹಾರಗಳು ನಿಮ್ಮಿಂದ ಬೇರೆಯಾಗಿಲ್ಲ. ಈ ಕಲ್ಪನೆ ನಿಮ್ಮಲ್ಲಿ ಇರುವವರೆಗೆ ನೀವು ಅದನ್ನು ಬಿಡುವುದು ಸಾಧ್ಯವಿಲ್ಲ. ಆತ್ಮವನ್ನು ಪುಸ್ತಕಗಳಲ್ಲಿ ಕಾಣಲಾಗುವುದಿಲ್ಲ. ವೇದಾಂತಪುಸ್ತಕಗಳು ಹೇಳುವುದಾದರೂ ನಿನ್ನೊಳಗಿರುವ ಆತ್ಮವನ್ನು ಅನುಭವ ಮಾಡಿಕೊ ಎಂದು. ಆದ್ದರಿಂದ ನೀವೇ ಅದನ್ನು ನಿಮ್ಮೊಳಗೆ ಕಂಡುಕೊಳ್ಳುವ ಪ್ರಯತ್ನ ಮಾಡಬೇಕು" ಭಕ್ತರೊಬ್ಬರು ಮನೋವಿಕಾರಗಳನ್ನು ಜಯಿಸುವುದು ಹೇಗೆ ಎಂದು ಪ್ರಶ್ನಿಸಿದಾಗ ಭಗವಾನನು ಉತ್ತರ ಕೊಡುತ್ತ "ಮನೋವಿಕಾರಗಳು ಹೊರಗಿನಿಂದ ಬರುವುದಿಲ್ಲ. ಅವು ನಮ್ಮ ಮನಸ್ಸಿನಲ್ಲಿಯೆ ಹುಟ್ಟುವ ಶತ್ರುಗಳು. ಆದ್ದರಿಂದ ಅವು ಹುಟ್ಟುವ ಮೂಲವನ್ನು ಹುಡುಕಬಲ್ಲೆವಾದರೆ ಅವುಗಳನ್ನು ಜಯಿಸಬಹುದು" ಎಂದರು. ಅಹಂಕಾರವನ್ನು ಕೊಲ್ಲುವ ಉತ್ತಮ ಮಾರ್ಗ ಯಾವುದು ಎಂಬ ಪ್ರಶ್ನೆಗೆ ಭಗವಾನನು ಕೊಟ್ಟ ಉತ್ತರ

ವೇನೆಂದರೆ "ಆತ್ಮದಲ್ಲಿ ಅಹಂಕಾರವನ್ನು ಮುಳುಗಿಸುವುದೇ ಎಲ್ಲ ಮಾರ್ಗಗಳ ಗುರಿಯಾಗಬೇಕು. ಭಕ್ತನು ಆತ್ಮಸಮರ್ಪಣೆ, ಶರಣಾಗತಿ ಎಂದು ಯಾವುದಕ್ಕೆ ಹೇಳುತ್ತಾನೋ ವಿಚಾರವಂತರು ಅದನ್ನೇ ಜ್ಞಾನ ಎನ್ನುತ್ತಾರೆ. ಆತ್ಮಶೋಧನೆಯಲ್ಲಿ ಅಹಂಕಾರವನ್ನು ನಾಶಪಡಿಸಲು ಇಬ್ಬರೂ ಪ್ರಯತ್ನಿಸುತ್ತಾರೆ". ರಮಣರು ರಾಮ ನಾಮದ ಅರ್ಥವನ್ನು ಹೀಗೆ ವಿವರಿಸಿದ್ದಾರೆ. ರಾಮ ಎಂಬ ಎರಡಕ್ಷರದಲ್ಲಿ 'ರಾ' ಎಂಬುದು ಆತ್ಮವನ್ನು ಸೂಚಿಸುತ್ತದೆ. 'ಮ' ಎಂಬುದು ಅಹಂಕಾರವನ್ನು ಸೂಚಿಸುತ್ತದೆ. ರಾಮ ರಾಮ ಎಂದು ಜಪಿಸುತ್ತಿರುವಾಗ 'ಮ' ಅಕ್ಷರವು 'ರಾ' ಅಕ್ಷರದಲ್ಲಿ ಮುಳುಗಿಹೋಗಿ 'ರಾ' ಮಾತ್ರ ಉಳಿಯುತ್ತದೆ. ಎಂದರೆ ಅಹಂಕಾರವು ಆತ್ಮನಲ್ಲಿ ಕರಗಿಹೋಗಿ ಆತ್ಮನ ಅರಿವು ಮಾತ್ರ ಬೆಳಗುತ್ತದೆ.

ಒಮ್ಮೆ ಭಕ್ತರೊಬ್ಬರು ಯಥಾರ್ಥ ಎಂದರೇನು ಎಂದು ಕೇಳಿದ ಪ್ರಶ್ನೆಗೆ ರಮಣರು "ಯಥಾರ್ಥವೆಂದರೆ ಸತ್ಯ. ಯಥಾರ್ಥ ಜ್ಞಾನವೆಂದರೆ ಇದ್ದದ್ದನ್ನು ತಿಳಿಯುವುದು. ಆದರೆ ಈಗ ನಾವು ಹಾಗೆ ತಿಳಿಯುತ್ತಿಲ್ಲ. ನಿಜವಾಗಿ ಇರುವುದು ಆತ್ಮ. ಆದರೆ ಅನಾತ್ಮವಾದ ದೇಹಾದಿಗಳ ಪ್ರಪಂಚವನ್ನು ಸತ್ಯವೆಂದು ತಿಳಿಯುತ್ತಿದ್ದೇವೆ. ಆದ್ದರಿಂದ ನಮಗೆ ಅಶಾಂತಿ ತಪ್ಪುವುದಿಲ್ಲ" ಎಂದು ಉತ್ತರ ನೀಡಿದರು.

ಭಾವನೆ ವಿವಿಧ ಕಲ್ಪನೆಗಳ ಹೊರೆಯೇ ಮನಸ್ಸು. ಎಲ್ಲ ಭಾವನೆಗಳಿಗೂ ಮೂಲ "ನಾನು" ಎನ್ನುವ ಭಾವ. ಆದ್ದರಿಂದ ಈ "ನಾನು" ಎನ್ನುವುದರ ಮೂಲಸ್ವರೂಪವನ್ನು ಹುಡುಕುತ್ತ ಹೋದಾಗ ಮನಸ್ಸೇ ಮಾಯವಾಗುತ್ತದೆ. ಮನಸ್ಸು ಯಾವ ವಿಷಯದ ಕಡೆ ಹರಿದು ಹೋದರೂ ಆಯಾ ವಿಷಯಗಳಿಂದ ಹಿಂದಕ್ಕೆ ಎಳೆದುತಂದು ಆತ್ಮದಲ್ಲಿಯೆ ಇರಿಸಬಹುದು. ಎಲ್ಲ ಸುಖದ ಮೂಲವೂ ಆತ್ಮನೇ ಎಂದು ಅರಿತಾಗ ಮನಸ್ಸು ಆತ್ಮದಲ್ಲಿಯೆ ಸ್ಥಿರವಾಗಿ ನಿಲ್ಲುವುದು. ಇದೇ ವಿಚಾರಗಳನ್ನು ರಮಣರು ತಾವು ಬರೆದ 'ಶ್ರೀ ಅರುಣಾಚಲ ಪಂಚರತ್ನಂ' ಎಂಬ ಸ್ತೋತ್ರ ಪದ್ಯಗಳಲ್ಲಿ ಹೀಗೆ ಬರೆದಿದ್ದಾರೆ: "ಯಾರು ನಾನು ಎಂಬುದರ ಮೂಲ ಸ್ವರೂಪವನ್ನು ಶೋಧಿಸುತ್ತ ಹೋಗುತ್ತಾನೆಯೋ ಆತನಿಗೆ ಮನಸ್ಸಿನ ಮೂಲವು ಸಿಕ್ಕುವುದು. ಅದೇ ಹೃದಯ. ಆ ಹೃದಯಾಂಗಣದಲ್ಲಿಯೇ ತೇಜೋಮಯನಾದ ಶಂಕರನು ಕುಣಿಯುತ್ತಿರುವನು. ಅಲ್ಲಿ ಸತ್ಯ–ಅಸತ್ಯ, ಜನ್ಮ–ಮೃತ್ಯು, ಸುಖ–ದುಃಖ ಕತ್ತಲೆ–ಬೆಳಕು ಮೊದಲಾದ ಯಾವ ದ್ವಂದ್ವಗಳೂ ಇರುವುದಿಲ್ಲ".

1948 ರಲ್ಲಿ ರಮಣರಿಗೆ ಮರಣಾಂತವಾದ ಕ್ಯಾನ್ಸರ್ ಹುಣ್ಣು ಎಡಗೈ ಮೇ[illegible] ಕಾಣಿಸಿಕೊಂಡಿತು. ವೈದ್ಯರುಗಳು ಭಗವಾನ ಅಮೂಲ್ಯ ಜೀವನವನ್ನು ಉಳಿಸುವುದಕ [illegible] ನಾಲ್ಕು ಬಾರಿ ಶಸ್ತ್ರಕ್ರಿಯೆ ನಡೆಸಿದರು ಭಗವಾನರಾದರೋ "ಈ ದೇಹವೇ ಒಂದು ಹುಣ್ಣು ಎನಿಸಿರುವಾಗ ಅದಕ್ಕೆ ಔಷಧೋಪಚಾರವೇಕೆ? ಅನಗತ್ಯ ಗಮನವೇಕೆ? ಎಂದು ನುಡಿದು, ಸಹಿಸಲಸಾಧ್ಯವಾ[illegible] ನೋವಿದ್ದರೂ ಅದಕ್ಕೂ ತಮಗೂ ಯಾ[illegible] ಸಂಬಂಧವೂ ಇಲ್ಲದಂತೆಯೇ ಇರುವುದನ್ನು ಕಂಡು ವೈದ್ಯರುಗಳು ಆಶ್ಚರ್ಯಚಕಿತರಾದರು.

ರೋಗ ಉಲ್ಬಣಿಸಿತು. ದಿನಾಂ[illegible] 14-4-1950 ಶುಕ್ರವಾರದಂದು ರಾತ್ರಿ ಭಗವಾನರು ಭಕ್ತಜನರಿಗೆ ದರ್ಶ[illegible] ನೀಡಿದರು. ಎಲ್ಲರ ಮುಖಗಳಲ್ಲಿ ಕಳವಳ ಆತಂಕ ಹೊರಸೂಸುತಿತ್ತು. ಮಹರ್ಷಿಗಳು ಮಲಗಿದ್ದ ಕೋಣೆಯ ಹೊರಭಾಗದಲ್ಲಿ ಭಕ್ತಸಮೂಹ ನೆರೆದು ಭಗವಾನ ಅರುಣಾಚಲ ಸ್ತುತಿಯನ್ನು ಸಾಮೂಹಿಕವಾಗಿ ಹಾಡುತ್ತಿದ್ದರು. ಆ ಧ್ವನಿ ಭಗವಾನ ಜೀವರಕ್ಷಣೆಗಾಗಿ ಹೊರಟ ಆರ್ತನಾದಂತಿತ್ತು. ಆದರೆ ವಿಧಿನಿಯಮವೆಂಬಂ[illegible] ಭಗವಾನರು ಒಮ್ಮೆ ಮಾತ್ರ ಸ್ವಲ್ಪ ಕಣ್ಣು ತೆರೆದರು. ಮತ್ತೆ ಮುಚ್ಚಿದ ಕಣ್ಣು ತೆರೆಯಲಿಲ್ಲ. ಇಹದ ಮಹಾಚೇತನವೊಂದು ಸರ್ವವ್ಯಾಪಿಯಾದ ಪರಮಾತ್ಮನಲ್ಲಿ ಲೀನವಾಯಿತು. ಆ ಸಮುದಾಯದಲ್ಲಿ ಪ್ರಕಾಶಮಯವಾದ ಬೆಳಕಿನ ಪುಂಜವೊಂದು ಅರುಣಾಚಲೇಶ್ವರನ ದೇವಾಲಯದ ಗೋಪುರದತ್ತ ಚಲಿಸಿ ಕಾಣದಾಯಿತು.

ರಮಣಮಹರ್ಷಿಗಳ ಭೌತಿಕವಾ[illegible] ಶರೀರವು ನಶಿಸಿದರೂ ಅವರ ದಿವ್ಯದರ್ಶನ ತಾತ್ತ್ವಿಕ ಚಿಂತನೆ, ಮಾನವಲೋಕದ ಉದ್ಧಾರಕ್ಕಾಗಿ ಶಾಶ್ವತವಾಗಿ ಉಳಿದು, ಮೋಹ ಮಮತೆ, ಆಶೆ, ನಿರಾಶೆ, ಸುಖ–ದುಃಖಗಳೆಂಬ ಜೇಡನ ಬಲೆಯಲ್ಲಿ ಸಿಲುಕಿರು[illegible] ನಮಗೆ ಅದರಿಂದ ಬಿಡುಗಡೆಯ ದಾರಿಯನ್ನು ತೋರುವ ದೀವಟಿಗೆಯಾಗಿದೆ. ಅಜ್ಞಾನದ ಕತ್ತಲನ್ನು ಹರಿಸಿ ಬೆಳಕಿನೆಡೆಗೆ ನಮ್ಮನ್ನು ಕರೆದೊಯ್ಯುವ ದಿವ್ಯಜ್ಯೋತಿಯಾಗಿದೆ.

# ತಿರುಮಳಿಶೈ ಆಳ್ವಾರ್

ತಿರುಮಳಿಶೈ ಎಂಬ ದಿವ್ಯಕ್ಷೇತ್ರದಲ್ಲಿ ಇಂದ್ರಪದವಿ ಪಡೆಯುವ ಆಸೆಯಿಂದ ಭೃಗು ಋಷಿಗಳು ತಪಸ್ಸು ಮಾಡುತ್ತಿದ್ದರು. ಇದನ್ನು ಕೇಳಿ ಇಂದ್ರನು ಋಷಿಯ ತಪಸ್ಸನ್ನು ಭಂಗಪಡಿಸಲು ಒಬ್ಬ ಅಪ್ಸರ ಸ್ತ್ರೀಯನ್ನು ಅಲ್ಲಿಗೆ ಕಳುಹಿಸಿದನು. ಅಪ್ಸರೆಯು ಋಷಿಯನ್ನು ನಿತ್ಯವೂ ಉಪಚರಿಸುತ್ತ, ತನ್ನ ಹಾವಭಾವ ವಿಲಾಸಗಳಿಂದ ಋಷಿಯ ಮನಸ್ಸಿನಲ್ಲಿ ವಿಕಾರ ಹುಟ್ಟಿಸಿ, ಅವನು ವಿಷಯಾಭಿಲಾಷಿಯಾಗುವಂತೆ ಮಾಡಿದಳು. ಅವರ ಸಮಾಗಮದಿಂದ ಕೆಲವು ಕಾಲಾನಂತರ ಒಂದು ಮಗುವು ಹುಟ್ಟಿತು. ಇಂದ್ರನ ಉದ್ದೇಶ ಸಫಲವಾಯಿತು. ಅಪ್ಸರೆಯು ಮಗುವನ್ನು ಆಶ್ರಮದಲ್ಲಿ ಬಿಟ್ಟು ತನ್ನ ಲೋಕವನ್ನು ಸೇರಿದಳು. ಋಷಿಯೂ ಕೂಡ ಆಶ್ರಮದ ಮಂಡಡಿಯಲ್ಲಿ ಸೊಪ್ಪಿನ ಹಾಸಿಗೆ ಮಾಡಿ ಮಗುವನ್ನು ಮಲಗಿಸಿ, ತಪಸ್ಸು ಮಾಡಲು ಹೊರಟುಹೋದನು.

ಆಶ್ರಮದ ದಾರಿಯಲ್ಲಿ ಬರುತ್ತಿದ್ದ ತಿರುವಾಳನೆಂಬ ಬೇಡನು ಮಗುವಿನ ಅಳುವನ್ನು ಕೇಳಿ ಓಡಿಬಂದು ಮಗುವನ್ನು ಎತ್ತಿಕೊಂಡು ಸಮಾಧಾನ ಪಡಿಸಿದನು. ಮಕ್ಕಳಿಲ್ಲದ ಬೇಡನು, ದರಿದ್ರನು ಧನವನ್ನು ಕಂಡಂತೆ ಹರ್ಷಿತನಾಗಿ, ಮಗುವನ್ನು ಮನೆಗೆ ಎತ್ತಿಕೊಂಡು ಹೋಗಿ ತನ್ನ ಪತ್ನಿಗೆ ಕೊಟ್ಟನು. ಅವಳು ಮಗುವನ್ನು ವಿಶ್ವಾಸದಿಂದ ಕಾಣಲು ಅವಳಿಗೆ ಮಾತೃಸೂಚನೆ ಕಂಡುಬಂದಿತು. ಆದರೆ, ಮಗುವು ಸ್ತನ್ಯಪಾನದಲ್ಲಿ ಆಸಕ್ತಿ ತೋರಿಸಲಿಲ್ಲ. ಭಕ್ತನೊಬ್ಬನು ತಂದುಕೊಟ್ಟ ಹಸುವಿನ ಹಾಲನ್ನು ಕೊಡಲು, ಮಗುವು ಅದನ್ನು ಕುಡಿಯಲು ಪ್ರಾರಂಭಿಸಿ ಬೆಳೆಯುತ್ತ ಬಂದಿತು. ಹಾಗೆ ಬೆಳೆಯುತ್ತ ಮಗುವು ಬಾಲಕನಾಗಿ ಓಡಾಡುತ್ತಿರುವಾಗ ಅವನಿಗೆ ಎರಡು ವರ್ಷವಾಯಿತು.

ಅನಂತರ ಬಾಲಕನು ವಿದ್ಯೆ ಕಲಿಯುವ ಇಚ್ಛೆಯಿಂದ ಗುರುಕುಲ ಸೇರಿದನು. ಅಲ್ಲಿ ಅನೇಕವರ್ಷ ವೇದ, ವೇದಾಂಗಗಳನ್ನು ಅಧ್ಯಯನಮಾಡಿ, ತರ್ಕ ವ್ಯಾಕರಣ ವೇದಾಂತಾದಿ ಶಾಸ್ತ್ರಗಳನ್ನು ವ್ಯಾಸಂಗಮಾಡಿ ಸಕಲಶಾಸ್ತ್ರ ಪ್ರವೀಣನಾದನು. ಆ ಮೇಲೆ ಅನೇಕ ದಿವ್ಯಕ್ಷೇತ್ರಗಳಲ್ಲಿ ಅರ್ಚಾಮೂರ್ತಿಯಾಗಿ ಪ್ರಕಾಶಿಸುತ್ತಿದ್ದ ಪರಮಾತ್ಮನ ದಿವ್ಯಮಂಗಳ ವಿಗ್ರಹಗಳನ್ನು ದರ್ಶನಮಾಡಿ, ಸಿದ್ಧಹಸ್ತನಾಗಿ, ಯೋಗಾಭ್ಯಾಸದಲ್ಲಿ ನಿರತನಾದನು. ಕೆಲವು ವರ್ಷಗಳು ಕಳೆದ ನಂತರ ಪರಶಿವನ ಪರಮ ಭಕ್ತನಾಗಿ ಆಶ್ರಮವಾಸಿಯಾಗಿ, ತಿರುಮಳಿಶೈ ಆಳ್ವಾರ್ ಎಂದು ಪ್ರಸಿದ್ಧನಾದನು. ಹಾಗೆ ಅಲ್ಲಿದ್ದಾಗ, ಮೌನವ್ರತವನ್ನು ಆಚರಿಸಿದನು. ಈತನಿಗೆ ಭಕ್ತಿಸಾರರೆಂಬ ಹೆಸರೂ ರೂಢಿಯಲ್ಲಿ ಬಂದಿತು.

ಹೀಗೆ ಆಳ್ವಾರರು ಧ್ಯಾನಾಸಕ್ತರಾಗಿ ಆಶ್ರಮದಲ್ಲಿ ಮೌನವ್ರತಧಾರಿಗಳಾಗಿದ್ದಾಗ ಆಳ್ವಾರ್ ಪರಂಪರೆಯಲ್ಲಿ ಮೂರನೆಯವರಾಗಿ ಪರಮಾತ್ಮನ ನಂದಕಾಂಶರಾಗಿ ಅವತರಿಸಿದ ಪೇಯಾಳ್ವಾರರು, ಭಕ್ತಿಸಾರರನ್ನು ಹೇಗಾದರೂ ಮಾಡಿ ಪರಮಾತ್ಮನು ಭವದ ಕಡೆಗೆ ಆಕರ್ಷಿಸಬೇಕೆಂದು ಇವರ ಬಳಿಗೆ ಬಂದರು. ಇವರು ಮೌನವ್ರತದಲ್ಲಿದ್ದುದರಿಂದ, ಇವರೊಡನೆ ಮಾತನಾಡುವಂತಿರಲಿಲ್ಲ. ಅವರೆದುರಿಗೆ ಕೆಲವು ಕಾಲ ಇರಲು ನಿಶ್ಚಯಮಾಡಿದರು. ಅವರ ಆಶ್ರಮದ ಎದುರಿಗೆ, ಅವರಿಗೆ ನಿತ್ಯವೂ ಕಾಣಿಸುವಂತೆ ಒಂದು ಹೂವಿನ ತೋಟವನ್ನು ನಿರ್ಮಾಣ ಮಾಡಿದರು. ಹೂವಿನ ಗಿಡಗಳನ್ನು ತಂದು, ಎಲೆಕಡ್ಡಿಗಳನ್ನು ಭೂಮಿಯಲ್ಲಿ ಹೂಳಿ, ಬೇರನ್ನು ಮೇಲೆ ಮಾಡಿ ನಿತ್ಯವೂ ನೀರುಹಾಕಲು ಪ್ರಯತ್ನಿಸಿದ್ದರು. ಅನೇಕ ರಂಧ್ರವುಳ್ಳ ಗಡಿಗೆಯೊಂದರಲ್ಲಿ ನೀರುತುಂಬಿ ಗಿಡದ ಬಳಿಗೆ ಬರುವ ಹೊತ್ತಿಗೆ ಗಡಿಗೆಯ ನೀರೆಲ್ಲಾ ಸೋರಿಹೋಗುತ್ತಿತ್ತು. ನಿತ್ಯವೂ ಹೀಗೆ ಮಾಡುತ್ತಿದ್ದ ಪೇಯಾಳ್ವಾರರ ಪ್ರಯತ್ನವನ್ನು ಭಕ್ತಿಸಾರರು ಗಮನಿಸುತ್ತಿದ್ದರು.

ಕೊನೆಗೆ ಒಂದು ದಿವಸ. ಪೇಯಾಳ್ವಾರರ ಅಪ್ರಯೋಜಕ ಪ್ರಯತ್ನವನ್ನು ಕಂಡು ಅವರ ಎದುರಿಗೆ ನಿಂತು, ಭಕ್ತಿಸಾರರು, "ಇದೇನು? ಇದೆಂತಹ ಹುಚ್ಚು ನಿಮಗೆ?" ಎಂದು ತಮ್ಮ ಮೌನವ್ರತವನ್ನು ಮುರಿದರು. ಅದೇ ಸಮಯಕ್ಕಾಗಿ ಕಾಯುತ್ತಿದ್ದ ಪೇಯಾಳ್ವಾರರು, ಭಕ್ತಿಸಾರರನ್ನು ಕುರಿತು "ಸ್ವಾಮಿ! ಜಗತ್ಕಾರಣನೂ, ನಿಯಾಮಕನೂ, ಮೋಕ್ಷದಾತನೂ ಆಗಿರುವ ಪರಮಾತ್ಮನನ್ನು ನೇರವಾಗಿ ಸಾಕ್ಷಾತ್ಕರಿಸದೆ, ಅವನನ್ನು ಅಂತರ್ಯಾಮಿಯಾಗಿ ಹೊಂದಿರುವ ಪರಶಿವನನ್ನು ಆರಾಧಿಸುತ್ತಿರುವ ನಿಮಗೆ ಹುಚ್ಚೋ ಅಥವ ನನಗೆ ಹುಚ್ಚೋ? ನೀವೇ ಯೋಚಿಸಿ ಹೇಳಿ" ಎಂದರು. ಇಬ್ಬರಿಗೂ ಶಾಸ್ತ್ರವಾದ ವಿವಾದಗಳು ನಡೆದವು. ಇಬ್ಬರೂ ವಾಕ್ಯಾರ್ಥ ಮಾಡಿದರು. ಕೊನೆಗೆ ಪೇಯಾಳ್ವಾರರ ವಾದಸರಣಿಯನ್ನು ಭಕ್ತಿಸಾರರು ಅಂಗೀಕರಿಸಿದರು. ಜಗತ್ತನ್ನು ಸೃಷ್ಟಿಸಿ, ಪೋಷಿಸಿ, ರಕ್ಷಿಸುವ ಸಾಮರ್ಥ್ಯ ಶ್ರೀಮನ್ನಾರಾಯಣನಿಗೆ ಮಾತ್ರ ಇದೆ ಯೆಂಬುದನ್ನು ಒಪ್ಪಿಕೊಂಡರು. ಆ ವೇಳೆಗೆ ಮೊದಲನೆಯ ಮೂರುಮಂದಿ ಆಳ್ವಾರರು ಭಕ್ತಿಸಾರರಿಗೆ ಪರಮಾತ್ಮನ ವೈಭವವನ್ನು ಪ್ರೀತಿಯಿಂದ ವರ್ಣಿಸಿ, ವಿಷ್ಣುಭಕ್ತಿಯು ಅವರಲ್ಲಿ ಬೇರೂರಿ ನಿಲ್ಲುವಂತೆ ಉಪದೇಶಮಾಡಿದರು.

ಆ ಮೇಲೆ, ತಿರುಮಳಿಶೈಯಾಳ್ವಾರರು ಕಾಂಚೀಪುರಕ್ಕೆ ಬಂದು ಬ್ರಹ್ಮನಿಂದ ಆರಾಧಿತನಾಗಿದ್ದ ವರದರಾಜಸ್ವಾಮಿಯನ್ನು ದರ್ಶನ ಮಾಡಿ ಯಥೋಕ್ತಕಾರಿ ದೇವಾಲಯದಲ್ಲಿ ನೆಲೆಸಿದರು. ಅಲ್ಲಿರುವಾಗ, ನಿತ್ಯವೂ ಉಪಚಾರಮಾಡುತ್ತಿದ್ದ ಕುಬ್ಜೆ

ಶ್ರೀ ಡಿ. ಕೃಷ್ಣಅಯ್ಯಂಗಾರ್

ಯೊಬ್ಬಳನ್ನು ಕಂಡು ಮರುಗಿ ಆಳ್ವಾರರು ತಮ್ಮ ಯೋಗಶಕ್ತಿಯಿಂದ ಅವಳಿಗೆ ಯೌವನ, ಸೌಂದರ್ಯವುಂಟಾಗುವಂತೆ ಅನುಗ್ರಹಿಸಿದರು. ಅವಳು ಅಲ್ಲಿಯ ರಾಜನ ಬಳಿಗೆ ಹೋಗಿ ತನ್ನ ವಿಚಾರ ತಿಳಿಸುವ ಸಂದರ್ಭವುಂಟಾಯಿತು. ರಾಜನು ತಾನೂ ಯೌವನ ಪಡೆಯಬೇಕೆಂಬ ಆಸೆಯಿಂದ ಆಳ್ವಾರರು ಅರಮನೆಗೆ ಬರಬೇಕೆಂದು ಒತ್ತಾಯಪಡಿಸಿದನು. ಆದರೆ ಆಳ್ವಾರರು ಹಾಗೆ ಮಾಡಲು ನಿರಾಕರಿಸಿದರು. ಅವರನ್ನು ರಾಜ್ಯ ಬಿಟ್ಟುಹೋಗುವಂತೆ ರಾಜನು ಅಪ್ಪಣೆ ಮಾಡಿದನು. ಅದರಿಂದ ಉಂಟಾದ ದುಷ್ಪರಿಣಾಮಗಳನ್ನು ರಾಜನು ಗಮನಿಸಿ, ಆಳ್ವಾರರ ಬಳಿಗೆ ಬಂದು ಕ್ಷಮೆಯನ್ನು ಯಾಚಿಸಿ ಪಶ್ಚಾತ್ತಾಪ ವ್ಯಕ್ತಪಡಿಸಿದನು. ಅನಂತರ ಆಳ್ವಾರರು ಯಥೋಕ್ತಕಾರಿ ದೇವಾಲಯದಲ್ಲಿ ನಿಲ್ಲಲು ಒಪ್ಪಿಕೊಂಡರು.

ತಿರುಮಳಿಶೈ ಆಳ್ವಾರರು ನಾನ್ಮುರ್ಕ ತಿರುವಂದಾದಿ ಮತ್ತು ತಿರುಚ್ಚಂದವಿರುತ್ತಂ ಎಂಬ ಎರಡು ದಿವ್ಯಪ್ರಬಂಧಗಳನ್ನು ರಚಿಸಿ ಹಾಡಿದ್ದಾರೆ. ಮೊದಲನೆಯ ಮೂರು ಮಂದಿ ಆಳ್ವಾರರು ಹಾಡಿರುವ ತಿರುವಂದಾದಿ ಛಂದಸ್ಸಿನಲ್ಲಿ ನಾನ್ಮುರ್ಕ ತಿರುವಂದಾದಿ ಇದೆ. ಇದರಲ್ಲಿ ಶ್ರೀಮನ್ನಾರಾಯಣನೇ ಜಗತ್ಕಾರಣನು, ಅವನೇ ಸರ್ವೇಶ್ವರನು ಎಂಬುದನ್ನು ಆಳ್ವಾರರು ಸ್ಥಾಪಿಸಿದ್ದಾರೆ. ಶ್ರೀ ರಂಗನಾಥಸ್ವಾಮಿಯ ದರ್ಶನದ ಅನುಭವವನ್ನೂ ಶ್ರೀವಿಲ್ಲಿಪುತ್ತೂರಿನ ವಟಪತ್ರಶಾಯಿ ಸ್ವಾಮಿಯ ವೈಭವವನ್ನೂ ಆಳ್ವಾರರು ತಮ್ಮ ಯೋಗದೃಷ್ಟಿಯಿಂದ ತಿಳಿದು, ಅವರು ಶ್ರೀಮನ್ನಾರಾಯಣನ ಸ್ವರೂಪವೆಂದೇ ನಿರೂಪಿಸಿ, ಸರ್ವದೇಶ, ಸರ್ವಕಾಲಗಳಲ್ಲಿ ಇಂತಹ ಪರಮಾತ್ಮ ಸ್ವರೂಪವನ್ನು ಕಾಣಬಹುದೆಂದು ಸ್ಥಾಪಿಸಿದ್ದಾರೆ. ಶ್ರೀಮನ್ನಾರಾಯಣನು ದೇವದೇವೋತ್ತಮನು. ಇತರ ದೇವತೆಗಳು ಅವನಿಂದ ಅವನ ಅಂಶಪಡೆದಿದ್ದಾರೆ. ಪರಮಾತ್ಮನ ಅವತಾರ, ಚೇತನರ ಉದ್ಧಾರಕ್ಕಾಗಿಯೂ, ಮತ್ತು ಅವರಲ್ಲಿ ಧಾರ್ಮಿಕ ಭಾವನೆಯನ್ನು ಉತ್ತಮಪಡಿಸುವುದಕ್ಕಾಗಿಯೂ ನಡೆಯುವುದು ಎಂದು ಆಳ್ವಾರರು, ಸೊಗಸಾದ ಪದ್ಯಗಳಲ್ಲಿ ತಿಳಿಸಿದ್ದಾರೆ.

ತಿರುಮಳಿಶೈ ಆಳ್ವಾರರಿಗೆ ತಿರುವೇಂಗಡವು ಅತ್ಯಂತ ಪವಿತ್ರವಾದ ಕ್ಷೇತ್ರ. ಇದರ ಬಗ್ಗೆ ಇವರು ಇತರ ಆಳ್ವಾರರಿಗಿಂತ ಹೆಚ್ಚಿನ ಪದ್ಯಗಳನ್ನು ಹಾಡಿದ್ದಾರೆ. "ಹೇ! ಶ್ರೀನಿವಾಸ ಸ್ವಾಮಿಯೇ! ನೀನು ದಯೆಯನ್ನು ಒಂ ಕ್ಷಣ ಬಿಟ್ಟಿರಲಾರೆ. ನಿನ್ನ ಅನುಗ್ರಹವಿಲ್ಲ ಪ್ರಯತ್ನಮಾತ್ರದಿಂದ ನಿನ್ನ ನ ಪಡೆಯಲು ಸಾಧ್ಯವಿಲ್ಲ." ವಿಷ್ಣುವಿನ ಅ ದೇವ ಸ್ವರೂಪವೇ ವೆಂಕಟೇಶನ ಅವತಾ ಅವನು ಭಕ್ತರ ಪಾಪಪರಿಹಾರ ಮಾಡುವನ ಬ್ರಹ್ಮರುದ್ರರು, ಸ್ವಾಮಿಯ ದರ್ಶನ ಉತ್ತರದಿಂದ ಪರ್ವತಾರೋಹಣ ಮಾ ಬರುವರು. ಮಾರ್ಕಂಡೇಯ ಋಷಿಯು ವೆಂಕಟಾಚಲಪತಿಯನ್ನು ಆರಾಧಿಸಿದ್ದಾ ಹೀಗೆ ಆಳ್ವಾರರು ನಾನ್ಮುರ್ಕ ತಿರುವಂದಾ ಯಲ್ಲಿ ಅದ್ಭುತ ರೀತಿಯಾಗಿ ಹಾಡಿದ್ದಾ ಇದರ ಕೊನೆಯ ಪದ್ಯದಲ್ಲಿ ಹೀಗೆ ಸ್ತೋ ಮಾಡಿದ್ದಾರೆ: "ಆದಿಶೇಷನಮೇಲೆ ಪವಡಿ ಆಶ್ರಿತರಿಗೆ ಅನುಗ್ರಹಿಸುತ್ತಿರುವ ನಿನ್ನ ನ ಧ್ಯಾನಮಾಡಿ, ನಿನ್ನ ಮಹಿಮೆಯನ ಕೊಂಡಾಡಿ, ನಮಸ್ಕರಿಸಿ, ಪೂಜಿಸಿ ನ ಕಾಲವನ್ನೆಲ್ಲ ಕಳೆದೆನು. ಪುಂಡರೀಕಾಕ್ಷ ನಾಮಾವಳಿ ಕಿವಿಗಿಂಪಾಗಿರುವುದು. ವೇ ಗಳ ಸಾರವೂ ಇಷ್ಟೇ ಅಲ್ಲವೇ? ಹೇ ಸ್ವಾಮಿ, ಜಗತ್ತಿಗೆ ಕಾರಣನಾದವನು ನೀನ ಶಾಸ್ತ್ರಗಳಿಂದ ತಿಳಿಯಲ್ಪಡುವವನು ನೀನ ಎಲ್ಲರಲ್ಲಿ ಅಂತರ್ಯಾಮಿಯಾಗಿರುವವ ನೀನು. ಹೇ! ಶ್ರೀಮನ್ನಾರಾಯಣ ನೀನೇ ಸರ್ವೋತ್ತಮನೆಂಬುದನ್ನು ಅ ತಿಳಿದೆನು".

ತಿರುಮಳಿಶೈಯಾಳ್ವಾರರ ಎರಡನೇ ದಿವ್ಯಪ್ರಬಂಧ ತಿರುಚ್ಚಂದವಿರುತ್ತಂ. ಇ ರಲ್ಲಿ ವೇದಾಂತ ತತ್ತ್ವದ ವಿವರಣವಿದೆ. ತತ್ತ್ವ ಅತ್ಯಂತ ಶ್ರೇಷ್ಠವಾದುದು. ಇಂತ ತತ್ತ್ವವನ್ನು ಇವರು ಮೊದಲಬಾ ಸಂಖ್ಯಾವಿವರಣ ರೂಪದಲ್ಲಿ ಹಾಡಿದ್ದಾ ಇದರಲ್ಲಿರುವ ನೂರಿಪ್ಪತ್ತು ಪಾಶುರಗಳನ ತಾಳ ಮತ್ತು ಲಯಬದ್ಧವಾಗಿ ಹಾ ಬಹುದು. ಈ ಪ್ರಬಂಧವು ಧಾರ್ಮಿಕ ಜ್ಯೋ ಯಂತಿದೆ. ಇದರಲ್ಲಿ ವೇದ, ಇತಿಹಾ ಪುರಾಣ, ಆಗಮಶಾಸ್ತ್ರ – ಇತ್ಯಾದಿಗಳನ ವಿಶದವಾಗಿ ಸ್ಪಷ್ಟಪಡಿಸಲಾಗಿದೆ. ಮಾತ್ಮನು ಸರ್ವಶಕ್ತನು. ಬಕಾಸು ಕೊಕ್ಕನ್ನು ಸೀಳಿದವನು. ವೇದಪ್ರತಿಪಾ

(27ನೇ ಪುಟ ನೋ

## ಆರ್ಜಿತ ಅಭಿಷೇಕ
## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಅರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ. ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

# ಗುರು ರುಕ್ಮಾಂಗದರು

ಮಾಣಿಕ್ಯ ಪಾದುಕಾರೂಢೌ
ಭಕ್ತ ಹಾರ್ದತಮೋ-ಭಿದೌ
ರುಕ್ಮಪಾದೋದಯಶ್ಚಾಸ್ತಾಂ
ಕಲ್ಯಾಣಾಯ ಪದೇ ಪದೇ

ವಿಜಯಪುರದ(ಈಗಿನ ಬಿಜಾಪೂರದ) ಶ್ರೀಗುರು ರುಕ್ಮಾಂಗದರು ಪಂಢರಪುರದ ಶ್ರೀ ವಿಜಯವಿಠಲನನ್ನು ಕುಲದೈವತವಾಗಿ ಇಟ್ಟುಕೊಂಡವರು. ರುಕ್ಮಾಂಗದಪಂಡಿತರ ಹೃದಯದಲ್ಲಿ ಪಾಂಡುರಂಗನ ಧ್ಯಾನ, ಚಿತ್ತದಲ್ಲಿ ಪಾಂಡುರಂಗನ ಮನನ; ನಾಲಿಗೆಯಲ್ಲಿ ಪಾಂಡುರಂಗನ ಸ್ಮರಣ; ಇಂದ್ರಿಯಗಳಲ್ಲಿ ಪಾಂಡುರಂಗನ ಸಂಚಲನ -ಹೀಗೆ ಸದಾಕಾಲ ಶ್ರೀ ಪಾಂಡುರಂಗನ ಚರಣಗಳಲ್ಲಿ ಕಾಯೇನವಾಚಾಮನಸಾ ಮಗ್ನರಾಗಿ ಸಾಯುಜ್ಯ ಪದವಿಯನ್ನು ಸುಗಮಗೊಳಿಸಿದರು. ಸಂತ ಸಮಾಗಮದೊಡನೆ ಆನಂದದ ಅನುಭವಾವಸ್ಥೆಯಲ್ಲಿರುತ್ತಿದ್ದರು. ಅವರೇ ರಚಿಸಿದ ಪದ್ಯಗಳಲ್ಲಿ;

"ಶ್ರೀ ಪಾಂಡುರಂಗ ವಿಮಾಲಾಂತರಂಗ
ಲಕ್ಷ್ಮೀವಾಮಾಂಗ ಮುನಿಜನಸಂಗ
..................................
ಪಾಂಡುರಂಗ ಪರಿಪಾಲಯಮಾಂ"

ಎಂದು ಪ್ರಾರ್ಥಿಸಿದ್ದಾರೆ. ಇವರು ವಿಜಯಪುರದಲ್ಲಿ ಶ್ರೀ ವಿಜಯವಿಠಲನ ಮೂರ್ತಿಯನ್ನು ಸ್ಥಾಪಿಸಿದ್ದಾರೆ. ಪಂಢರಪುರದಲ್ಲಿರುವ ಶ್ರೀ ವಿಜಯವಿಠಲ ಮೂರ್ತಿಗೆ ಉದರರೋಗವಾಗಿ ನಾಭಿಕಮಲದಿಂದ ಜಲಸ್ರಾವವಾಗಿ ಉಟ್ಟ ಪೀತಾಂಬರವು ತೊಯ್ದು ಹೋಯಿತಂತೆ. (ಶಕೆ: 1568 ವ್ಯಯನಾಮ ಸಂವತ್ಸರ) ಆಗ ಅರ್ಚಕರು ಹಾಗೂ ಅನೇಕ ಭಕ್ತರು ಉಪಾಯಗಾಣದೆ ಸ್ವಪ್ನದಲ್ಲಿ ಪರಮಾತ್ಮನ ಹೇಳಿಕೆಯಂತೆ ವಿಜಯಪುರದ ಈ ರುಕ್ಮಾಂಗದರನ್ನು ಪಂಢರಪುರಕ್ಕೆ ಬರಮಾಡಿಕೊಂಡರಂತೆ. ಆಷಾಢ ಏಕಾದಶಿಯದಿನ ಭಕ್ತ ರುಕ್ಮಾಂಗದರು ಭಕ್ತಿಯ ಬುಕ್ಕಿಟ್ಟನ್ನು ಶ್ರೀ ಪಾಂಡುರಂಗನ ನಾಭಿಕಮಲಕ್ಕೆ ಹಚ್ಚಿ ತಾವೇ ರಚಿಸಿದ 'ವಿಠಲಾಷ್ಟಕ'ದಿಂದ ಸ್ತುತಿಸಿದರು. ಈ ವಿಷಯವನ್ನು ಶ್ರೀ ಗುರುಮಾಲಿಕೆ ಗ್ರಂಥದಲ್ಲಿ ವಿಸ್ತಾರವಾಗಿ ಹೇಳಲಾಗಿದೆ,

"ಸತ್ಪುರುಷಂಗೆ ಅದಾವುದು ಅಸಾಧ್ಯವು". ಸುತ್ತಲೂ ಯವನರು ರಾಜ್ಯವಾಳುತ್ತಿರುವಾಗ ಹಿಂದೂಧರ್ಮದ ಆದರಲ್ಲಿಯೂ ವೈದಿಕಧರ್ಮದ ಗೌರವವನ್ನು ಕಾಯ್ದು ಅದನ್ನು ಉಳಿಸಿ ಬೆಳೆಸಿದ ಕೀರ್ತಿ ಇಲ್ಲಿಯ ಸತ್ಪುರುಷರದು. ಗುರು ರುಕ್ಮಾಂಗದರು ಆದಿಲಶಾಹಿ ರಾಜ್ಯದಲ್ಲಿದ್ದು ಕೊಂಡು ಹಿಂದೂ ಧರ್ಮ, ಸಂಸ್ಕೃತಿಗಳ ಪ್ರಸಾರಕ್ಕೆ ಅನುಕೂಲವಾಗುವಂತೆ ಕನ್ನಡ, ಮರಾಠಿ, ಸಂಸ್ಕೃತಗಳಲ್ಲಿ ಅನೇಕ ಪದ ಪದ್ಯಗಳನ್ನು ರಚಿಸಿದ್ದಾರೆ.

ಶ್ರೀ ಬಿ. ಎ. ಗುಡಿ

ರುಕ್ಮಾಂಗದಪಂಡಿತರ ಸಮಾಧಿಯು ಬಿಜಾಪುರ ಸ್ಟೇಶನದಿಂದ ಒಂದು ಮೈಲು ದೂರದಲ್ಲಿದೆ. ಎಲ್ಲ ಜಾತಿಬಾಂಧವರು ಪೂಜ್ಯಭಾವನೆಯಿಂದ ಇಲ್ಲಿ ನಡೆದುಕೊಳ್ಳುತ್ತಾರೆ. ಪ್ರತಿಗುರುವಾರ ಪಲ್ಲಕ್ಕಿ ಉತ್ಸವಕ್ಕಾಗಿ ಹಾಗೂ ದರ್ಶನಕ್ಕಾಗಿ ಇಲ್ಲಿ ಜನಸಮೂಹವು ಸೇರುತ್ತದೆ. ಫಾಲ್ಗುಣಶುದ್ಧ ದ್ವಾದಶಿ ಇವರ ಪುಣ್ಯದಿನ. ಈ ದಿನಗಳಲ್ಲಿ ವಿಶೇಷ ವೈಭವದಿಂದ ಆರಾಧನೆ ಜರುಗುತ್ತಿದ್ದು, ಸಾಮೂಹಿಕ ಅನ್ನ ಸಂತರ್ಪಣೆಯೂ ನಡೆಯುವುದು.

ಸುಮಾರು ಮುನ್ನೂರು ವರ್ಷಗಳ ಹಿಂದಿನ ಕಾಲದ ದಕ್ಷಿಣಶಾಹಿಗಳಲ್ಲಿ ಒಂದಾದ ಬಿಜಾಪುರದ ಆದಿಲಶಾಹಿ ಮನೆತನದಲ್ಲಿ ಎರಡನೆಯ ಅಲ್ಲೀ-ಆದಿಲಶಹನು ರಾಜ್ಯಭಾರ ನಡೆಸುತ್ತಿದ್ದನು. ಇವನ ರಾಜ್ಯದಲ್ಲಿ ಅನೇಕ ಹಿಂದೂಗಳು, ಹಿರಿಯ ಹುದ್ದೆಗಳಲ್ಲಿ ಇದ್ದರು. ಚರಿತ್ರನಾಯಕರ ತಂದೆಯಾದ ಕೃಷ್ಣಪಂಡಿತರು ದರಬಾರದಲ್ಲಿ ನ್ಯಾಯಪಾತಿಯಲ್ಲಿ ಅಧಿಕಾರಿಗಳಾಗಿದ್ದರು. ವಂಶಪರಂಪರೆಯಿಂದ ಬಂದ ವೈದ್ಯವಿದ್ಯೆಯಲ್ಲಿಯೂ ಇವರು ನಿಷ್ಣಾತರಾಗಿದ್ದರು. ಸತೀಶಿರೋಮಣಿ ಲಕ್ಷ್ಮಿಬಾಯಿಯು ಇವರ ಸಹಧರ್ಮಿಣಿ. ಕಟ್ಟುನಿಟ್ಟಾದ ಧಾರ್ಮಿಕಜೀವನವನ್ನು ಸಾಗಿಸುತ್ತಿರುವ ಈ ದಂಪತಿಗಳಿಗೆ ಒಂದೇ ಒಂದು ಕೊರತೆ, ಅದು ಮಕ್ಕಳಿಲ್ಲೆಂಬ ಚಿಂತೆ.

ಪುತ್ರಾಪೇಕ್ಷಿಗಳಾದ ಸಾತ್ತ್ವಿಕದಂಪತಿಗಳು ಒಮ್ಮೆ ತೀರ್ಥಯಾತ್ರೆಪ್ರಯಾಣ ಕೈಕೊಂಡರು. ದಕ್ಷಿಣಕಾಶಿಯೆನಿಸುವ ಪಂಪಾಕ್ಷೇತ್ರಕ್ಕೆ ಆಗಮಿಸಿ ಶ್ರೀ ವಿರೂಪಾಕ್ಷೇಶ್ವರನ ದರ್ಶನ ಪಡೆದರು. ಶ್ರೀ ಪಂಪಾಪತಿಯ ದರ್ಶನದಿಂದ ಪುನೀತರಾದ ಇವರು ತುಂಗಾತೀರದ ಸಪ್ತಸಾಗರ ಕ್ಷೇತ್ರದಲ್ಲಿ ಗುರು ಗೌರಾನಂದಯತಿಗಳ ಆಶ್ರಮಕ್ಕೆ ಬಂದರು. ಗುರುಗಳ ಸೇವೆಯನ್ನು ಸದ್ಭಕ್ತಿಯಿಂದ ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾದರು. ಅಂತಜ್ಞಾನದಿಂದ ಇವರ ಮನದ ಇಂಗಿತವನ್ನು ಅರಿತ ಗುರು ಗೌರಾನಂದರು ಭಕ್ತ ದಂಪತಿಗಳಿಗೆ;

ಗುರುರುಕ್ಮಾಂಗದರು ರಚಿಸಿದ ಶ್ರೀಕೃಷ್ಣಲೀಲೆಯ ಪದಗಳ ಸ್ವಾರಸ್ಯ ಹೀಗಿದೆ.

ಹರಿಗೋರಸ ಕುಡಿವುದು ನೋಡಿರೋ
ಪರಿಪರಿ ಸಂಭ್ರಮ ಮಾಡಿರೋ ॥ ಪಲ್ಲ ॥
ಕಾರಣವರಳಲಿ ವೃತ್ತಿಗುಣದಿ ತಾ
ಇದ್ದು ಯಶೋದೆಯು ಕಟ್ಟಿರಿಸಿ
ಸ್ತನವನುಣಿಸುತಿರಲು ನಿಜಕರ್ಮದ
ಚಲದಿ ಬಿಡಿಸಿಕೊಂಡಾಡುತಲಿ ॥ ೧ ॥
ನಾನಾಯೆನುತಾಡುವ ಗೋಪಾಲರ
ನೆರೆಸುವಂತೆ ಕುಣವುತಲಿ
ನಾನಾದ್ವಾರಗಳಿಂದ ಧುಮುಕಿ
ಮುಚ್ಚಿದ ಮಡಿಕೆಗಳ ನೋಡುತಲಿ ॥ ೨ ॥
ರಾಗಪೀಠದಲಿ ಮೋಹದ ಹೆಗಲಲಿ
ನಿಲ್ಲಲು ನೆಲವು ನಿಲುಕುತಿರಲು
ಯೋಗರುಕ್ಮ-ಘಟವನು ಭೇದಿಸಿ।
ವಿರತಿಗೊಲ್ಲತಿಗತಿ ಕಾಡುತಲಿ ॥ ೩ ॥

(ಈ ಪದ್ಯವನ್ನು ಇಂದಿಗೂ ಶ್ರೀಗುರುಗಳ ವಾರ್ಷಿಕ ಸಮಾರಾಧನೆಯ ಗೋಪಾಳಕಾದಲ್ಲಿ ಭಕ್ತರು ಸಾಮೂಹಿಕವಾಗಿ ಹೇಳುವ ಸಂಪ್ರದಾಯವುಂಟು.)

"ಪರಮಾತ್ಮನು ನಿಮ್ಮ ಇಚ್ಛೆ ಈಡೇರಿಸುವನು" ಎಂದು ಹೇಳಿ ಫಲಮಂತ್ರಾಕ್ಷತೆಯನ್ನು ನೀಡಿದರು. ಸತ್ಪುರುಷರ ಆಶೀರ್ವಾದ, ಅನುಗ್ರಹಗಳು ಎಂದಿಗೂ ಸಟಿಯಾಗಲಾರವು ಎಂಬ ನಂಬಿಕೆಯಿಂದ ಅವರು ಆನಂದಭರಿತರಾಗಿ, ಗುರುಗಳ ಅಪ್ಪಣೆಪಡೆದು ತೀರ್ಥಯಾತ್ರೆ ಮುಗಿಸಿ ವಿಜಾಪುರಕ್ಕೆ ಆಗಮಿಸಿದರು.

ಸದ್ಗುರು ಪ್ರಸಾದದ ಮಹಿಮೆಯಿಂದ ಸ್ವಾಧ್ವೀಮಣಿಯಾದ ಲಕ್ಷ್ಮೀಬಾಯಿಯ ಹೊಟ್ಟೆಯಿಂದ ಒಂದು ಕನ್ಯಾರತ್ನ ಜನಿಸಿತು. "ಮಕ್ಕಳಿಲ್ಲದ ಮನೆಗೆ ಮಣಿದೀಪವಾಯಿತು ಬಡವರ ಮನೆಗೆ ಭಾಗ್ಯ ಬಂದಂತಾಯಿತು." ಬಂಧು ಬಳಗದವರೆಲ್ಲ ಸೇರಿ ಆ ಮಗುವಿಗೆ ಭಾಗೀರತಿ ಎಂದು ನಾಮಕರಣ ಮಾಡಿದರು. ಮುಂದೆ ಕೆಲವು ವರ್ಷಗಳಲ್ಲಿ (ಸುಮಾರು ಕ್ರಿಸ್ತಾಬ್ದ 1610) ಸುಮುಹೂರ್ತವೊಂದರಲ್ಲಿ ತಾಯಿ ಲಕ್ಷ್ಮೀಬಾಯಿಯ ಗರ್ಭದಿಂದ ಕಣ್ಣು ಕುಕ್ಕಿಸುವಂತಹ ಕೂಸೊಂದು ಅವತರಿಸಿತು. ಸುಲಕ್ಷಣವಾದ ತೇಜಃಪುಂಜವಾದ ಮಗುವನ್ನು ಕಂಡು ತಂದೆ ತಾಯಿಗಳು, ಬಂಧುಬಳಗದವರೆಲ್ಲರೂ ಹಿರಿ ಹಿರಿ ಹಿಗ್ಗಿದರು. ಮಗುವಿನ ಮೈಮುಖಗಳ ಕಾಂತಿ ಬಂಗಾರ (ರುಕ್ಮ) ದಂತೆ ಬೆಳಗುತ್ತಿದ್ದುದರಿಂದ "ರುಕ್ಮಾಂಗದ" ಎಂಬ ಯಥಾರ್ಥ ನಾಮದಿಂದ ಕರೆದರು.

ಬಿದಿಗೆಯ ಚಂದ್ರನಂತೆ ರುಕ್ಮಾಂಗದನು ಬೆಳೆಯತೊಡಗಿದನು. ಮಗುವಿನ ಮುದ್ದುಮುಖ ದಟ್ಟಡಿ, ತೊದಲ್ನುಡಿಗಳನ್ನು ನೋಡುವ, ಕೇಳುವ ಭಾಗ್ಯ ಆ ತಾಯಿತಂದೆಗಳಿಗಿರಲಿಲ್ಲ. "ದೈವಲೀಲೆ ವಿಚಿತ್ರವಾದುದು." ತಬ್ಬಲಿಯಾದ ಬಾಲಕರುಕ್ಮಾಂಗದನ ಪೋಷಣಭಾರವು ಭಗಿನಿಯಾದ ಭಾಗೀರತಿಯ ಮೇಲೆ ಬಿದ್ದಿತು. ಅವಳಾದರೂ ತಮ್ಮನ ಅಭ್ಯುದಯಕ್ಕಾಗಿ ಹಾತೊರೆಯುತ್ತಿದ್ದಳು. ತಂದೆಯಂತೆ ತಮ್ಮನಾದರೂ ಘನವಿದ್ವಾಂಸನಾಗಬೇಕೆಂದು ಅವಳ ಹೆಬ್ಬಯಕೆ. ಅವನಿಗೆ ಕಲಿಯುವದೆಂದರೆ ತಲೆಶೂಲೆ. ಆಟಪಾಟಗಳಲ್ಲಿ ಆಸಕ್ತಿ. ಅಕ್ಕನಿಂದ "ಕಲಿಯಬೇಕು" ಎಂಬ ಒತ್ತಾಯ ಬಂದಾಗ, ಏಕೆ ಕಲಿಯಬೇಕು? ಕಲಿತು ಮಾಡುವುದಾದರೂ ಏನು? ಎಂದು ಪ್ರಶ್ನೆಗಳನ್ನೆತ್ತುತ್ತಿದ್ದನಂತೆ. ತಮ್ಮನ ಮೇಲಿನ ಮಮತೆಯಿಂದ, ಮನೆತನದ ಅಭಿಮಾನದಿಂದ ಅವಳು ನಿರಾಶಳಾಗದೆ ತಮ್ಮನ ಅಭ್ಯುದಯವನ್ನೇ ಚಿಂತಿಸುತ್ತಿದ್ದಳು. ಅಜ್ಞಾನಾಂಧಕಾರವನ್ನು ಕಳೆಯಲು ಜ್ಞಾನಜ್ಯೋತಿಯನ್ನು ಬೀರುವ ಸದ್ಗುರುಗಳಗಾಗಿ, ಅವರ ಕೃಪಾವೃಷ್ಟಿಗಾಗಿ ಚಾತಕ ಯಂತೆ ಹಾತೊರೆಯುತ್ತಿದ್ದಳು.



ಸದ್ಭಕ್ತರ ಚಿಂತೆಗಳನ್ನೂ ದೂರಗೊಳಿಸು ದಕ್ಕಾಗಿಯೋ, ರುಕ್ಮಾಂಗದನ ಮಹಿಮೆಯ ಜನರಲ್ಲಿ ಬೀರುವುದಕ್ಕಾಗಿಯೋ ಎಂಬಂತೆ ಒಂ ದಿನ ಅಕಸ್ಮಾತ್ತಾಗಿ ಗೌರಾದಂದ ಯ ಗಳು ವಿಜಯಪುರಕ್ಕೆ ಆಗಮಿಸಿದರು. ಪಂಡಿ ಮನೆಯ ಆತಿಥ್ಯಸ್ವೀಕರಿಸಿ ಭಾಗೀರತಿಗೆ-'ಅಮ್ಮಾ ನಿನ್ನ ತಮ್ಮನೆಲ್ಲಿ? ಎಂದು ಕೇಳಿದರು. ಆ ಅವಳು' "ಮಂದಮತಿಯಾದ ರುಕ್ಮನು ಇ ಕೆಲಸಕ್ಕಾಗಿ ಮನೆಯಲ್ಲಿಯೂ ಇಲ್ಲ; ಕಲಿಯು ದಕ್ಕಾಗಿ ಮಠಕ್ಕೂ ಹೋಗಿಲ್ಲ" ಎಂದು ದೀ ವದನಳಾಗಿ ನುಡಿದಳು, 'ತಾಯೀ ಚಿಂತಿಸದಿರ ಸಿಂಹದಮರಿ ಎಂದಾದರೂ ಮೇಕೆಯಾಗಿ ಬಾ ಬಲ್ಲುದೇ? ನಿನ್ನ ತಮ್ಮನು ಮಂದಮತಿಯ ಮಹಾತ್ಮನಾಗುವನು'' ಎಂದು ಭವಿಷ್ಯವಾ ಯನ್ನು ಬಿತ್ತರಿಸಿದರು. "ಪೂರ್ವಾರ್ಜಿತ ಪು ಬಲದಿಂದ ಸ್ವಾಮಿಗಳ ಅನುಗ್ರಹ ಆಶೀವಾ ದಗಳಾದವು'' ಎಂದು ಹೇಳುತ್ತ ಷೋಡಶೋ ಚಾರಗಳಿಂದ ಗುರುಗಳನ್ನು ಪೂಜಿಸಿದಳ ಷಡ್ರಸಯುಕ್ತವಾದ ಪಾನಾಪಕ್ವಾನ್ನಗಳ ಭಿ ಕೊಟ್ಟಳು. ಅವಳ ಮನದ ಇಂಗಿತವನ್ನು ಅರಿ ಗುರುಗೌರಾನಂದರು ರುಕ್ಮಾಂಗದನನ್ನೂ ಹತ್ತಿ ಕರೆದು ಉಪದೇಶಕೊಟ್ಟರು.

ಸೂರ್ಯನು ಉದಯಾಚಲಕ್ಕೆ ಬರಲು ಕ ಲೆಯು ನಾಶವಾಗುವಂತೆ ಸ್ಪರ್ಶಮಣಿಯಿಂ ಕಬ್ಬಿಣವು ಬಂಗಾರವಾಗುವಂತೆ, ಚಂದ್ರಕಿರ ಗಳ ಪ್ರಕಾಶದಿಂದ ಕುಮುದವು ವಿಕಸಿಸುವಂತೆ ಸ್ವಾಮಿಗಳ ಚರಣಸ್ಪರ್ಶದಿಂದ ರುಕ್ಮಾಂ ದನ ಅಜ್ಞಾನವು ಅಳಿಯಿತು. ಅಂತರಂಗದ ಸದ್ಭಾವ ಅಂಕುರಿಸಿತು. ರುಕ್ಮಾಂಗದನ ಅಂತ ಶುದ್ಧಿಯನ್ನು ಕಂಡು ಗೌರನಂದರು ಪ ಮಾನಂದದಿಂದ ಸುಮ್ಮುಖದಲ್ಲಿರಿಸಿಕೊಂಡ ಶುದ್ಧಾಂತಃಕರಣದಿಂದ ತತ್ತ್ವಬೋಧ ಮಾ ದರು. ರಹಸ್ಯ ಬೀಜಮಂತ್ರಾಕ್ಷರಗಳನ್ನು ಕಿ ಯಲ್ಲಿ ಉಸುರಿದರು. ರುಕ್ಮಾಂಗದ ನದೈಹಿಕವಾ ನೆಗಳು ದೂರವಾದವು. ನಿಸ್ಪೃಹತ್ವ ಪಡೆದರು. ಪೂರ್ಣ ಆನಂದ ಘನರಾದರು. ಮೂರ್ತಿಮತ್ತಾ ದಿವ್ಯಜ್ಞಾನವು ಪ್ರಕಟವಾಯಿತು. ನಾನು ನೀನು ಎಂಬ ವಿಚಾರಭೇದವು ಇಲ್ಲದಂತಾಯಿತು. ಉಪ್ಪು ನೀರಿನೊಡನೆ ಬೆರೆತಾಗ ನೀರೇ ಆಗಿ ಸಹಜವಾಗಿ ಐಕ್ಯತೆ ಪಡೆಯುವಂತೆ ಈರ್ವರೂ ಆತ್ಮೈಕ್ಯಸುಖವನ್ನು ಅನುಭವಿಸಿದರು. ಷೋಡಶಾಕ್ಷರಿ ಮಂತ್ರೋಪದೇಶದ ನಂತರ ರುಕ್ಮರ

(26 ನೇ ಪುಟ ನೋಡಿ)

## ಕಿಶೋರಜಗತ್

# ತಾಯಿ ದೇವರು

‘ಅಮ್ಮಾ’ ಎಂದು ನಾವೊಮ್ಮೆ ಕರೆದರೆ ಸಾಕು–ನಮ್ಮ ಮೈಯಲ್ಲಿ ಅರಿವಿಲ್ಲದೆಯೇ ನವಿರೇಳುತ್ತದೆ. ನಮ್ಮ ಹೃತ್ಪೂರ್ವಕ ಅಂತಃಕರಣದಿಂದ ಹೊರ ಚಿಮ್ಮಿ ಬಂದ ಪ್ರೀತಿಯು ಕರೆಯನ್ನಾಲಿಸಿ ಎಲ್ಲಿದ್ದರೂ ಓಡಿಬಂದು ಸುಖಕಷ್ಟ ವಿಚಾರಿಸುತ್ತಾಳೆ. ಸಾಂತ್ವನದ ನುಡಿಮುತ್ತುಗಳಿಂದ ನರನಾಡಿಗಳಲ್ಲಿ ಸ್ಫೂರ್ತಿಯ ವಿದ್ಯುತ್ ಪ್ರವಾಹ ಹರಿಸುತ್ತಾಳೆ.

ತಾಯಿ–ನಮ್ಮ ಕಣ್ಣಿಗೆ ನಿತ್ಯವೂ ಕಾಣಸಿಗುವ ದೇವರು–ಆಕೆ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನಮಾನಗಳನ್ನೂ ಪಡೆದಿದ್ದಾಳೆ–ಶಾಂತಿ, ಸೌಜನ್ಯ, ಸ್ನೇಹ ಸಹಕಾರಗಳ ಸಚೇತಕ ಶಕ್ತಿಯೇ ಅವಳಾಗಿ ನಮ್ಮ ಕಣ್ಣಿಗಿಂದು ಕಾಣಿಸಿಕೊಳ್ಳುತ್ತಾಳೆಂದರೂ ತಪ್ಪಾಗಲಾರದು.

ತ್ಯಾಗ, ಸೈರಣೆ, ದಯೆ, ಕಷ್ಟಸಹಿಷ್ಣುತೆ, ಕರ್ಮನಿಷ್ಠೆ–ಇವೇ ಮೊದಲಾದ ಉತ್ತಮಗುಣಗಳೆಲ್ಲವೂ ಆಕೆಯಲ್ಲಿ ಮೈಗೂಡಿವೆ. ನೋವಿನ ನಡುವೆಯೂ ನವಮಾಸ ಪರ್ಯಂತ ಹೊತ್ತು ಹೆತ್ತು ಸಾಕಿ ಸಲಹುವ ಮಮತಾಮಯಿ ಆಕೆ. ಅನಂತ ಸಹನೆಯ ಸಾಕಾರಸ್ವರೂಪಿಣಿ – ತಾನು ಕಷ್ಟಪಟ್ಟರೂ ಚಿಂತೆಯಿಲ್ಲ. ತನ್ನ ಮಕ್ಕಳು ಸುಖದಿಂದ ಇರಬೇಕೆಂದಾಶಿಸುತ್ತಾಳೆ. ಮಕ್ಕಳ ಲಾಲನೆ ಪಾಲನೆ ಆರೈಕೆಯಲ್ಲಿ ತನ್ನ ಸುಖದುಃಖಗಳೆಲ್ಲವನ್ನೂ ಮರೆತು ಮಗುವಾಗಿ, ತಾಯಾಗಿ, ನಕ್ಕು ನಲಿಸುತ್ತಾ ನಲಿನಲಿದು ಆತ್ಮಾನಂದ ಕಂಡುಕೊಳ್ಳುತ್ತಾಳೆ – ತಂದುಕೊಡುತ್ತಾಳೆ. ಮಕ್ಕಳ ಹಿತ ಸಂರಕ್ಷಣೆ ಹಾಗೂ ಪುರೋಭಿವೃದ್ಧಿಯೇ ಅವಳ ಜೀವನದ ಮುಖ್ಯ ಗುರಿಯಾಗುತ್ತದೆ. ತಾಯ್ತನದಲ್ಲಿ ಹೆಣ್ತನದ ಪರಿಪೂರ್ಣ ತೃಪ್ತಿ ಹೊಂದುವುದೇ ಅವಳ ಹಿರಿಮೆ ಹಾಗೂ ಗರಿಮೆ. ಮಕ್ಕಳು ಹೆಚ್ಚಾಗಿ ತಾಯ ತೋಳ ತೊಟ್ಟಿಲು, ತೋಳ ಮಂಚಗಳಲ್ಲೇ ಹೆಚ್ಚಿನ ಕಾಲ ವ್ಯಯಿಸುವುದರಿಂದ ಹೆಚ್ಚಾಗಿ ತಾಯಗುಣ ಸ್ವಭಾವವನ್ನೇ ಹೊಂದುತ್ತವೆಂಬುದು ಕೆಲವರ ಅನಿಸಿಕೆ.

ಮಕ್ಕಳಿಗೂ ಅಷ್ಟೆ–ತಾಯಿಯೆಂದರೆ ಹಿರಿಹಿಗ್ಗು–ಅವಳಿಕ್ಕುವ ತುತ್ತನ್ನ ಮೃಷ್ಟಾನ್ನ, ಸಿಹಿಯೂಟಕ್ಕೆ ಸರಿಸಮಾನ. ಬೆಳವಣಿಗೆಗೆ ಸಂಪೂರ್ಣ ಸಹಾಯಕ. ಅವಳೊಂದಿಗೆ ನಕ್ಕು ನಲಿಯುತ್ತಾ, ಬಿದ್ದು ಹೊರಳಾಡುತ್ತಾ, ನಿರ್ಮಲಾಂತಃಕರಣದ ವಾತ್ಸಲ್ಯ ಪ್ರವಾಹದಲ್ಲಿ ತಾವೇ ತಾವಾಗಿ ಬಣ್ಣಿಸಲಸಾಧ್ಯವಾದೊಂದು ತೃಪ್ತಿ ಹಾಗೂ ಆನಂದವನ್ನು ಅನುಭವಿಸುತ್ತವೆ. ಬೇನೆ ಬೇಸರಿಕೆಗಳು ತಮ್ಮದೇನೇ ಇರಲಿ, ತಾಯಲ್ಲಿ ಹೇಳಿಕೊಂಡರೆ ಹಗುರವಾದೀತೆಂಬ ಆಸೆ. ಹೇಳಿಕೊಳ್ಳಲೂ ನಾಚಿಕೆ, ವಂಚನೆ ಇರುವುದಿಲ್ಲ.

ಆಕೆಯೂ ಅಷ್ಟೆ–ತನ್ನ ಮಕ್ಕಳ ಆಸೆ, ಆಕಾಂಕ್ಷೆಗಳೇನುಂಟು, ಅವನ್ನು ಪೂರೈಸುವುದರಲ್ಲಿಯೇ ತನ್ನ ತನು ಮನ ಧನವನ್ನೆಲ್ಲಾ ಪೂರ್ಣ ಪ್ರಮಾಣದಲ್ಲಿ ವ್ಯಯಿಸುತ್ತಾಳೆ. ತಂದೆಯು ಘನತೆ. ತಾಯಿ ಶ್ರೇಷ್ಠತೆಯನ್ನು ಹೊಂದಿಕೊಂಡಿದೆ. ಮನೆತನದ ಮರ್ಯಾದೆ ಮಾತೆಯ ಕೈಯಲ್ಲಿ ಅಡಗಿದೆ. ಕುಲಗೌರವದ ಅಳಿವು ಉಳಿವು ಅವಳ ಸಂತೃಪ್ತ ಜೀವನ್ನವಲಂಭಿಸಿದೆ. ಮಕ್ಕಳ ಜೀವನ ವಿಕಾಸದ ನಿಜವಾದ ಊರುಗೋಲೇ ಅವಳೆನಿಸಿದ್ದಾಳೆ.

ತಂದೆಯು ಮನವೊಲಿಸಿ ತಮ್ಮ ಕೇಳಿಕೆಯ ಈಡೇರಿಕೆಯಲ್ಲೂ ತಾಯ ಸಹಾಯವನ್ನೇ ಅಪೇಕ್ಷಿಸುವ ಮಕ್ಕಳು ಆಕೆಯನ್ನು ತಮ್ಮ ಜೀವನದಿಯ ದಾಟುವಿಕೆಯಲ್ಲಿ ಸುಭದ್ರ ಸೇತುವೆಯನ್ನಾಗಿ ಕಲ್ಪಿಸಿಕೊಂಡಿದ್ದಾರೆ.

ಮಕ್ಕಳಿಗೆ ಪಾಠ ಕಲಿಸುವುದರಲ್ಲಿ, ದೈವಿಕ ಹಾಗೂ ಸಾಂಸ್ಕೃತಿಕ ಭಕ್ತಿಶ್ರದ್ಧೆ ಮೂಡಿಸಿ ಬೆಳೆಸುವಲ್ಲಿ ಅವಳು ಮೊದಲ ಗುರುವೇ ಆಗಿದ್ದಾಳೆ. ಅವಳ ಮಡಿಲಲ್ಲೇ ಬೆಳದಿಂಗಳಂತೆ ಕಂಗೊಳಿಸುವ ಮಾತೆಯ ಕಣ್ಮಣಿ ಮಕ್ಕಳು ‘ಅ ಆ ಉ ಊ’ ತೊದಲ್ನುಡಿ ಕಲಿತು ತನ್ಮೂಲಕ ನೆರೆಹೊರೆಯವರನ್ನು ಪ್ರೀತಿಸುವುದನ್ನು, ಒಟ್ಟುಗೂಡಿ ಒಂದಾಗಿ ಬೆರೆತು ಬಾಳಿ ಬದುಕುವ ಮಾರ್ಗವನ್ನು, ಕಂಡುಕೊಳ್ಳುತ್ತವೆ. ಪ್ರಗತಿಜೀವನದ ಸಫಲತೆಯ ಹಾದಿಯಲ್ಲಿ ಮುಳ್ಳಿನೋಪಾದಿಯಲ್ಲಿ ಬರತಕ್ಕ ಅನೇಕಾನೇಕ ತೊಡಕುಗಳನ್ನು ನಾಸಿದ್ದೇನೆಂದು



ಧೈರ್ಯಸ್ಥೈರ್ಯ ತುಂಬಿಸಿ ತನ್ನ ಮಗನನ್ನು ನಾಗರಿಕ ಸತ್ಪ್ರಜನ, ಆದರ್ಶವೀರ ಪುತ್ರನನ್ನಾಗಿ ಮಾಡುವುದರಲ್ಲಿಯೂ ಆಕೆಯ ಪಾತ್ರ ಮಹತ್ವದ್ದಾಗಿರುತ್ತದೆ.

ಕನಸು ಮನಸಿನಲ್ಲೂ ಸ್ವಾರ್ಥದ ಚಿಂತನೆಯಿಲ್ಲದೆ ತ್ಯಾಗಕ್ಕಾಗಿಯೇ ಶೋಷಣೆ, ದೂಷಣೆಗಳೆಲ್ಲವನ್ನೂ ಸಹಿಸಿ ನುಂಗಿಕೊಂಡು ಕಣ್ಣಿಗೆ ಕಣ್ಣಿಟ್ಟು ತನ್ನ ಮಕ್ಕಳು ಅಡ್ಡಹಾದಿ ತುಳಿಯದಂತೆ ಯತ್ನಿಸಿ, ಆತುರ ಕಾತುರತೆಗಳಿಂದಲೇ ಅವರ ಪ್ರಗತಿಶೀಲತೆಯನ್ನು ಗಮನಿಸುತ್ತಾಳೆ.

ಇಂದಿನ ಮಕ್ಕಳು ಭವಿಷ್ಯದ, ರಾಷ್ಟ್ರಾಭ್ಯುದಯದ ಸೂತ್ರಧಾರಿಗಳು ಎಂಬುದನ್ನು ಸದಾ ಮನಸಿನಲ್ಲಿಟ್ಟುಕೊಂಡು ಒಳ್ಳೆಯ ಜನಾಂಗ ಅನರ್ಘ್ಯರತ್ನಗಳನ್ನಾಗಿ ತನ್ನ ಮಕ್ಕಳನ್ನು ಪರಿವರ್ತಿಸುವಲ್ಲಿ ವೀರ ಸಂಕಲ್ಪತೊಟ್ಟು ಯಶಸ್ವೀ ಪಾತ್ರವಹಿಸುವ ಮಹಾಮಾತೆ, ಮಹಿಳಾಮಣಿಗಳನ್ನು ಮನಸಿನಲ್ಲಿಟ್ಟುಕೊಂಡೇ ಕರೆದಿರಬೇಕು “ಮಾತೃದೇವೋ ಭವ”–ತಾಯಿದೇವರು. ತಾಯಿ ದೇವರಿಗೆ ಸಮಾನ ಬಂಧುವಿಲ್ಲ. ಉಪ್ಪಿಗೆ ಸರಿಸಮಾನ ರುಚಿ ಬೇರೊಂದಿಲ್ಲ.

**ಶ್ರೀ ಪುತ್ತೂರು ವ್ಯಾಸಕೃಷ್ಣ ತಂತ್ರಿ**

ಆಡಿ ಬಾ ನನಕಂದ ಅಂಗಾಲ ತೊಳೆದೇನು
ತೆಂಗಿನಕಾಯಿ ತಿಳಿನೀರ ತಕ್ಕೊಂಡು
ಬಂಗಾರ ಮೋರೆ ತೊಳೆದೇನು
ಯಾರು ಇದ್ದರು ತಾಯಿ ಇದ್ದಾಂಗಿಲ್ಲ
ಸಾವಿರ ಸೌದೆ ಒಲೆಯಲ್ಲಿ ಇದ್ದರು
ದೀವಿಗೆ ಇದ್ದನಕ ಬೆಳಕಿಲ್ಲ.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಭಾರತೀಯ ಸಂತರ ಐಕ್ಯಭಾವ

ಸಂತರಾಮದಾಸರು ಪ್ರಸಿದ್ಧ ರಾಮಭಕ್ತರಾಗಿದ್ದರು. ಅವರು ಮರಾಠಿಯಲ್ಲಿ ಭಕ್ತಿಸಾಹಿತ್ಯ ರಚಿಸಿದಂತೆಯೇ ಹಿಂದಿ ಮತ್ತು ಉರ್ದುವಿನಲ್ಲೂ ಪದಾವಲಿ ರಚಿಸಿದರು. ಧರ್ಮ, ಪಂಥ ಅಥವಾ ಸಂಪ್ರದಾಯದಲ್ಲಿ ಕುರುಡಾದ (ಮೂಢರು) ವ್ಯಕ್ತಿಗಳನ್ನು ಜಾಗೃತಗೊಳಿಸುವುದೇ ಅವರ ಪರಮ ಗುರಿಯಾಗಿತ್ತು. ಅವರ ಈ ರಚನೆ ಕೇವಲ ಜಾಗರೂಕತೆಯವರೆವಿಗೆ ಮಾತ್ರ ಸೀಮಿತವಾಗಿಲ್ಲ, ಇದರಲ್ಲಿ ಏಕಭೂಮಿ, ಏಕಸಮಾಜದ ಸಂಪೂರ್ಣ ಸಂತ ಮಂಡಳಿಯ ಆದರ್ಶ ಸೂತ್ರವೂ ಸಹ ಪೋಷಿತವಾಗಿದೆ. ಭಾರತೀಯ ಐಕ್ಯತೆಯ ಪ್ರಸಾರ–ಪ್ರಚಾರದ ಬಗ್ಗೆ ಸಂತರ ಪದ್ಧತಿಯು ಒಂದು ಉತ್ತಮ ಮಾದರಿಯಾಗಿದೆ.

ಭಾರತೀಯ ಸಂತರು ಐಕ್ಯಭಾವದ ಬೃಹತ್ತಾದ ಮನೋಹರ ದರ್ಶನ ಮಾಡಿಸಿದ್ದಾರೆ. ಅವರು ನಿಪುಣರಾಗಿದ್ದು, ತಿಳುವಳಿಕೆ ಪಡೆದಿದ್ದರಿಂದಲೇ ಇದು ಅವರಿಂದ ಸಾಧ್ಯವಾಯಿತು. ಏಕೆಂದರೆ, ಪ್ರತಿಯೊಬ್ಬ ವ್ಯಕ್ತಿಗೂ ಮೋಕ್ಷಪ್ರಾಪ್ತಿಯ ಅಧಿಕಾರವಿದೆ, ಮತ್ತು ಅವರು (ಅವರವರ) ತಮ್ಮ ಅಭಿರುಚಿಗೆ ತಕ್ಕಂತೆ, ಜೀವನದ ಉಪಾಸನೆ–ಸಾಧನೆ ಮಾಡಲು ಪೂರ್ಣ ಸ್ವಾತಂತ್ರ್ಯವಿದೆ. ವಿಶುದ್ಧ ಭಗವತ್ಪ್ರೇಮದ ಭಾವನೆಯಿಂದ ಬೇರೆ ಬೇರೆ ಭಾಷೆಗಳ ಮತ್ತು ಪ್ರಕೃತಿ ಧರ್ಮಗಳ ಎಲ್ಲಾ ಜನರನ್ನು ಮಮತೆಯಿಂದ ತಮ್ಮ ಬಳಿ ಕರೆದು, ಅವರಿಗೆ ಮಾನವೀಯತೆಯ ಏಕಾತ್ಮದ ರಹಸ್ಯ ತಿಳಿಯುವಂತೆ ಮಾಡಿದರು. ಇದಕ್ಕಾಗಿ ಎಲ್ಲಾ ಸಂತರು ಧರ್ಮಯಾತ್ರೆ ಮತ್ತು ತೀರ್ಥಯಾತ್ರೆಗಳನ್ನು ಮಾಡಿದ್ದರು.

ಚೈತನ್ಯ ಮಹಾಪ್ರಭುಗಳು ಗೋಕುಲ–ಬೃಂದಾವನದ ಜತೆ–ಜತೆಯಲ್ಲಿಯೇ ಆಂಧ್ರ, ಕರ್ನಾಟಕ, ಮಹಾರಾಷ್ಟ್ರ ಮೊದಲಾದ ಪ್ರದೇಶಗಳ ಯಾತ್ರೆಮಾಡಿ, ಭಾರತದ ಎಲ್ಲಾ ಕಡೆಗಳಲ್ಲೂ ಕೃಷ್ಣಭಕ್ತಿಯ ಅಲೆಗಳ ಪ್ರವಾಹ ಉಂಟು ಮಾಡಿದರು. ವಲ್ಲಭಾಚಾರ್ಯರು ತೆಲುಗು ಮಾತನಾಡುವ ಆಂಧ್ರ ನಿವಾಸಿಗಳಾಗಿದ್ದರು; ಆದರೆ ಅವರು ಹಿಂದಿ ಭಾಷೆಯ ಉತ್ತರ ಪ್ರದೇಶದಲ್ಲಿ ನೆಲಸಿ ಬೃಂದಾವನವನ್ನು ತಮ್ಮ ಕಾರ್ಯಕ್ಷೇತ್ರದ ರೂಪದಲ್ಲಿ ಆರಿಸಿಕೊಂಡರು. ಅಲ್ಲದೆ ಒಂದು ವಿಶಾಲ ಭಕ್ತಿಯ ಆಂದೋಲನ (ಚಳುವಳಿ) ವನ್ನು ನಡೆಸಿದರು. ಅವರ ಪರಂಪರೆಗೆ ಸೂರದಾಸರಂತಹ ಶ್ರೇಷ್ಠ ಕವಿಗಳು ಪ್ರಾಪ್ತರಾದರೆಂಬುದು ಒಂದು ದೈವೀ ಸಂಯೋಗವೆಂದೇ ಕರೆಯಬಹುದು. ಸಂತ ಸೂರದಾಸರು ತಮ್ಮ ಪದಾವಳಿಗಳಿಂದ ಕೇವಲ ಹಿಂದಿಯಲ್ಲ, ಮರಾಠಿಯ ಸಂತರನ್ನೂ ಪ್ರಭಾವಿತಗೊಳಿಸಿದರು. ವಲ್ಲಭಾಚಾರ್ಯರಿಗೆ ಮೊದಲೂ ಸಹ ನಿಂಬಾರ್ಕ, ಮಧ್ವ, ಹಾಗೆಯೇ ಶಂಕರಾಚಾರ್ಯರೇ ಮೊದಲಾದವರೂ ಕೂಡ ಇಡೀ ಭಾರತವನ್ನು ತಮ್ಮ ಕಾರ್ಯಕ್ಷೇತ್ರವೆಂದು ತಿಳಿದು ತಮ್ಮ ತಮ್ಮ ಮತಗಳ ಪ್ರಸಾರ ಮಾಡಿದರು. ಎಲ್ಲಾ ಭಾರತೀಯ ಸಂತರಿಗೆ ಇಡೀ ಭರತಖಂಡವೇ ಧರ್ಮಕ್ಷೇತ್ರವೆಂಬ ಅರಿವಿತ್ತು.

ಮೇರು ಪರ್ವತ ಸಾಲುಗಳಿಂದ ಹಿಡಿದು ಸಪ್ತ ದ್ವೀಪಗಳವರೆವಿಗೆ "ಜಂಬೂಖಂಡ"ವೆಂದು ಬಹಳ ಹಿಂದಿನ ಕಾಲದಿಂದಲೂ ಕರೆಯಲ್ಪಡುತ್ತಿದೆ. ಈ ಜಂಬೂದ್ವೀಪವೇ ಭರತಖಂಡ ಎಂಬ ಹೆಸರು ಪಡೆದಿದೆ. ಇದರಲ್ಲಿ ಕುರು, ಹಿರಣ್ಮಯ, ರಮ್ಯಕ ಇಲಾವೃತ್ತ, ಹರಿ, ಕೇತುಮಾಲಾ, ಭದ್ರಾಶ್ವ, ಕಿನ್ನರ ಮೊದಲಾದ ಪ್ರದೇಶಗಳು ಸೇರಿದ್ದವು. ಈ ಸಂಪೂರ್ಣ ಕ್ಷೇತ್ರ ಪ್ರಾಚೀನ ಕಾಲದಿಂದಲೂ "ಧರ್ಮಕ್ಷೇತ್ರ"ವೆಂದು ಪ್ರಸಿದ್ಧವಾಗಿತ್ತು. ಗೀತೆಯಲ್ಲಿರುವ ಕುರುಕ್ಷೇತ್ರದ ಉಲ್ಲೇಖವೂ ಸಹ ಈ ಧರ್ಮಕ್ಷೇತ್ರದಲ್ಲಿ ಅಂತರ್ಗತವಾಗಿದೆ. ಶಂಕರಾಚಾರ್ಯರೇ ಮೊದಲಾದ ಆಚಾರ್ಯ ಸಂತರೂ ಕೂಡ ಭರತಖಂಡವನ್ನು ಧರ್ಮಕ್ಷೇತ್ರದ (ರೂಪದಿಂದಲೇ) ರೀತಿಯಲ್ಲಿಯೇ ನೋಡಿದ್ದಾರೆ.

ಕಬೀರ, ತುಲಸೀ, ಚೈತನ್ಯ, ಸೂರದಾಸ, ಮೀರ, ಜ್ಞಾನದೇವ, ನಾಮದೇವ, ನಾಭಾಜೀ ಮೊದಲಾದ ಸಂತರು ಮತ್ತು ನರೇಂದ್ರ, ಗೋರಖ ಮೊದಲಾದ ನವನಾಥರೂ ಸಹ ಧರ್ಮಕ್ಷೇತ್ರ ರೂಪದ ಭರತಖಂಡದಲ್ಲೇ ತಮ್ಮ ಕೆಲಸ ಮಾಡಿದರು. ನವನಾಥರುಗಳಲ್ಲಿ ಚೌರಂಗೀ, ಕಲ್ಯಾಣಿ (ಕರ್ನಾಟಕ), ಗೋರಖನಾಥ್, ಗೋರಖಪುರ್(ಉ-ಪ್ರದೇಶ), ಜಾಲಂಧರನಾಥ್, ಜಾಲಂಧರ್ (ಪಂಜಾಬ್) ಮತ್ತು ಮತ್ಸ್ಯೇಂದ್ರನಾಥ್, ಕಾಮಾಖ್ಯಾ (ಅಸ್ಸಾಂ) ಇವರು ಅಲ್ಲಿಯ ಪ್ರಸಿದ್ಧರು. ಅದರಂತೆಯೇ ಆಂಧ್ರದ ನಾಗಾರ್ಜುನ, ಪಂಜಾಬಿನ ಗೋಪೀಚಂದ್, ಮಹಾರಾಷ್ಟ್ರದ ಗಹಿನೀನಾಥ್‌ರ ಗಣನೆಯೂ ಸಿದ್ಧನಾಥರ ಜತೆಯಲ್ಲಿತ್ತು. ಈ ನವನಾಥರಲ್ಲಿ ವಿಶೇಷವಾಗಿ ಮತ್ಸ್ಯೇಂದ್ರನಾಥ್, ಗೋರಖ್ ನಾಥರು ಅಸ್ಸಾಂ, ಬಂಗಾಳ, ಮಹಾರಾಷ್ಟ್ರ, ಆಂಧ್ರ, ಕರ್ನಾಟಕ ಮುಂತಾದ ಪ್ರದೇಶಗಳ ಯಾತ್ರೆಮಾಡಿದ್ದರು. ಈ ಎಲ್ಲಾ ಪ್ರಾಂತ್ಯಗಳಲ್ಲಿ ನವನಾಥರ ಅಸಂಖ್ಯ ಭಕ್ತರು, ಶಿಷ್ಯರೂ ಇದ್ದಾರೆ. ಅವರು ನವನಾಥರ ಮತ್ತು ಸಿದ್ಧರ ಕಥೆಗಳನ್ನು ಬಹಳ ಶ್ರದ್ಧೆಯಿಂದ ಶೇಖರಿಸಿ ಇಟ್ಟಿದ್ದಾರೆ. ಈ ಶಿಷ್ಯರು ಮತ್ತು ಭಕ್ತರು ಬೇರೆ ಬೇರೆ ಭಾಷೆಗಳನ್ನಾಡುವವರಾಗಿದ್ದರೂ ಸಹ ಯಾವ ಭೇದ ಭಾವನೆಯೂ ಇಲ್ಲದೆ ಮತ್ಸ್ಯೇಂದ್ರ ಮತ್ತು ನಾಥ ಪಂಥೀಯ ಸಿದ್ಧರ ಧರ್ಮಕಥೆಗಳನ್ನು ಬಹಳ ಶ್ರದ್ಧೆಯಿಂದ ಹಾಡಿದ್ದಾರೆ.

ಮತ್ಸ್ಯೇಂದ್ರನೇ ಮೊದಲಾದ ನಾಥಸಿದ್ಧರಾಗಲೀ ಅಥವಾ ತುಲಸೀ, ಕಬೀರ, ಚೈತನ್ಯ, ನಾಮದೇವ ಮೊದಲಾದ ಸಂತವೃಂದರಾಗಲೀ, ಎಲ್ಲರ ವಿಶೇಷತೆಯೂ ಒಂದೇ. ಅದೆಂದರೆ, ಅವರು ತಮ್ಮ ವಿಚಾರ ಮತ್ತು ಭಾವನೆಗಳನ್ನು ಅಭಿವ್ಯಕ್ತಗೊಳಿಸುವುದಕ್ಕಾಗಿ ಜನರ ಭಾಷೆಯನ್ನೇ ಉಪಯೋಗಿಸಿರುವುದು. ನಾಮದೇವರ ಅಭಂಗ ರಚನೆ ಮರಾಠಿಯಲ್ಲಾಗಿದೆ ಆದರೆ ಅವರು ಹಿಂದೀ ಪ್ರದೇಶಕ್ಕೆ ಬಂದಾಗ ಹಿಂದಿಯಲ್ಲಿ ಪದಗಳ (ಹಾಡು) ರಚನೆ ಮಾಡಿದರು. ಭಾಷೆಯು ಕೇವಲ ವಿಚಾರ ವಾಹಕ ಎಂಬುದಕ್ಕೆ ಎಲ್ಲಾ ಸಂತರ ಒಪ್ಪಿಗೆಯೂ ಇದೆ. ಆದ್ದರಿಂದಲೇ ಅವರು ಎಷ್ಟು ಸಹಜತೆಯಿಂದ ತಮ್ಮ ಮಾತೃಭಾಷೆಯಲ್ಲಿ ರಚನೆಮಾಡಲು ಶಕ್ತರೋ ಅಷ್ಟೇ ಸಹಜತೆ, ಆತ್ಮೀಯತೆಯಿಂದ ಬೇರೆ ಭಾಷೆಗಳಲ್ಲಿಯೂ ಬರೆಯಲು ಸಾಧ್ಯವಾಯಿತು. ಸಂತ ಸಾಹಿತ್ಯದಲ್ಲಿ ಭಾರತೀಯ ಜೀವನದ ರಮಣೀಯ ಸ್ವರೂಪ ಅಭಿವ್ಯಕ್ತವಾಗುವಂತೆಯೇ (ಅವರಲ್ಲಿ) ವಿವೇಕ ಮತ್ತು ಸದ್ಬುದ್ಧಿಯ ದರ್ಶನವಾಗುತ್ತದೆಂಬುದೂ ಹಿರಿಮೆಯೇ ಆಗಿದೆ.

ಶ್ರೀಮತಿ ಕಲ್ಯಾಣಿಮೂರ್ತಿ

(24 ನೇ ಪುಟ ನೋಡಿ)

# ಆಂಡಾಳ್ ವೈಭವಂ

ಬಾನೊಳು ಬೆಳಗಲಿ ಚಂದ್ರಮನು
ಬೆಳಗಲಿ ಧರ್ಮವು ಇಳೆಯೊಳಗೆ
ತೋರಲಿ ಭಾರತ ಜ್ಞಾನದ ದೀವಿಗೆ
ಜಗದೊಳು ಮಿಗಿಲಾದಾದರ್ಶದೊಳು

ಆದರಿಸಿದಳೀ ಅವನಿಯನು
ಗೋಚರಿಸಿದಳೀ ಸುದಿನದೊಳು
ಇರುಳನು ನೀಗಿಸಿ ಜ್ಞಾನವ ಮಿಡಿಸಲು
ಅವತರಿಸಿದಳಾಂಡಾಳ್ ಭುವಿಯೊಳಗೆ

ಅಂದದಿ ನೆಲೆಸಿಹ ರಂಗನನೂ
ಅನುದಿನ ಸೇವಿಸೆ ಯೋಗಿಯ ತೆರದೊಳು
ಇರುತಿರೆ ವಿಲ್ಲಿಪುತ್ತೂರಿನೊಳು
ಭಕ್ತರೊಳ್ ಹಿರಿಯರು ವಿಷ್ಣುಚಿತ್ತರು ತಾ

ಕಂಡರು ಬರುತಿರೆ ಕಾನನದೀ
ತುಳಸಿಯನರಸಿದ ಭಕುತಗೆ ತಾ
ಕಂಡಳು ಕಣ್ಮಣಿ ನಸುನಗುತಾ
ಇತ್ತಳು ಬಂಧನ ಯೋಗಿಗು ತಾ

'ಚಿತ್ತವು ಹರಿನಿಂದೀ ಪರಿಯೋ
ಆಶಿಸಿ ಬರುತಿಹ ಕುವರಿಯೋ ನೀ'
ಅಂದದಿ ಒಯ್ಯುತ ಆಶ್ರಮಕಾ
ನಂದದಿ ಸಲಹಿದರ್ ಕುವರಿಯನೂ

ನಲ್ಮೆಯ ಕುವರಿಯ ನಿಡುಗುರುಳಾ
ಅವಲೋಕಿಸಿ ಪ್ರೇಮದಿ ಕರೆಯಲು ತಾ
ಪೊಂದಿದಳೀಪರಿ ನಾಮವನೂ
ಕೋದೈ ನಾಮವನವಧರಿಸಿ

ಪೇಳುವರ್ ಕುವರಿಗೆ ಶ್ರೀಹರಿಯು
ಹಿರಿಮೆಯ ನುಡಿಗಳ ಪ್ರೀತಿಯಲಿ
ಮೋದದಿ ಕೇಳ್ವಳು ಗೋದೆಯು ತಾ
ಮನದಲಿ ನೆನೆಯುತ ಶ್ರೀ ಹರಿಯ

"ಹೃದಯವೆ ದೇಗುಲವಾಗಲಿ
ಮಾಧವನೆಂಬುವ ದೇವನಿಗೇ
ಅರ್ಪಿಸು ಭಕುತಿಯ ಕುಸುಮವನು
ಒಲಿವನು ಶ್ರೀಹರಿ ಪ್ರೇಮದೊಳು"

ಮುಗುಳಿಹ ಮಲ್ಲಿಗೆ ಸಂಪಿಗೆಯೊಲು
ಉಷೆಯನು ಈಕ್ಷಿಸಿ ನಲಿಯುತಿರೆ
ನಿಂದಿಹಳ್ ಗೋದೆಯು ಸಂತಸದಿ
ನಂದನವನದಲಿ ನಗುನಗುತಾ

ಉಕ್ಕಿತು ಭಕುತಿಯು ಹೃದಯದೊಳು
ತುಂಬಿತು ಪುಟ್ಟಿಯೊಳು ಕುಸುಮಗಳು
ಗುಚ್ಛವ ಮಾಡಿದಳ್ ಶ್ರೀ ಹರಿಗೆ
ಅರ್ಪಿಸಿ ನೋಡಲು ಧರಿಸಿದಳು

---

ದಕ್ಷಿಣ ದೇಶದಲ್ಲಿ ವೈಷ್ಣವ ಭಕ್ತರಲ್ಲಿ ಹನ್ನೆರಡು ಜನ ಭಗವತ್‌ಭಕ್ತರು ಪ್ರಸಿದ್ಧರಾದವರು. ಅವರಲ್ಲಿ ಆಂಡಾಳ್ ಒಬ್ಬಳು. ಇವಳನ್ನು ತಮಿಳಿನಲ್ಲಿ ಶೂಡಿಕೊಡುತ್ತ ನಾಚ್ಚಿಯಾರ್ ಎಂದು ಕರೆಯುವರು. ಜನಕನಿಗೆ ಸೀತೆ ಅಯೋನಿಜೆಯಾಗಿ ಕಾಣಿಸಿಕೊಂಡಂತೆ, ಪೆರಿಯಾಳ್ವಾರ್‌ರವರಿಗೆ ಇವಳು ತುಳಸೀವನದಲ್ಲಿ ಕಾಣಿಸಿಕೊಂಡಳು. ಇವಳನ್ನು ಕಂಡು ಹರ್ಷಿತರಾಗಿ ತಮ್ಮ ಕುಟೀರಕ್ಕೆ ಎತ್ತಿಕೊಂಡು ಹೋಗಿ, ಭಗವಂತನ ಇಚ್ಛೆಯೋ ಎನ್ನುವಂತೆ, ಅಕ್ಕರೆಯ ಹಾಲೆರೆದು ಸಲಹಿದರು. ಈ ಕುವರಿಯ ಮುಂಗುರಳನ್ನು ನೋಡಿ ಇವಳಿಗೆ 'ಕೋದೈ' ಎಂಬ ನಾಮಕರಣವನ್ನು ಮಾಡಿದರು ; ಮತ್ತು ತಮ್ಮ ಜೊತೆಯಲ್ಲೇ ಶ್ರೀ ರಂಗನಾಥನ ಸೇವೆಯಲ್ಲಿ ನಿರತಳಾಗುವಂತೆ ಪ್ರೇರೇಪಿಸಿದರು. ಈಕೆ ಪೆರಿಯಾಳ್ವಾರರ ಜೊತೆಯಲ್ಲಿಯೇ ಪುಷ್ಪಕೈಂಕರ್ಯದಲ್ಲಿ ಭಾಗಿಯಾಗುತ್ತಿದ್ದಳು. ನಿತ್ಯವೂ ರಂಗನಾಥನಿಗೆ ಪುಷ್ಪಹಾರವನ್ನು ಮಾಡಿ ಪೆರಿಯಾಳ್ವಾರರು ಕಳಿಸುತ್ತಿದ್ದರು. ಒಂದು ದಿನ ಆಂಡಾಳ್ ಆ ಹಾರವನ್ನು ತಾನು ಧರಿಸಿಕೊಂಡು ಕನ್ನಡಿಯಲ್ಲಿ ನೋಡಿಕೊಂಡು, ಹಾರವು ರಂಗನಾಥನಿಗೆ ಸಮರ್ಪಿತವಾಗಿದೆ ಎಂದು ಬುಟ್ಟಿಯಲ್ಲಿಡುತ್ತಿದ್ದಳು. ಈ ಅನುಚಿತವನ್ನು ಕಂಡು ಪೆರಿಯಾಳ್ವಾರು ಕುಪಿತರಾದರು. ಆ ದಿನ ರಾತ್ರಿ ರಂಗನಾಥನು, "ಗೋದೆಯು ಮುಡಿದ ಹೂವು ತನಗೆ ಪ್ರಿಯವೆಂದು" ತಿಳಿಸಿದಂತೆ ಅವರಿಗೆ ಸ್ವಪ್ನವಾಯಿತು. ಇದರಿಂದ ಪೆರಿಯಾಳ್ವಾರಿಗೆ, 'ಗೋದೆಯು ಸಾಮಾನ್ಯ ಮಗುವಲ್ಲ, ಸಾಕ್ಷಾತ್ ಲಕ್ಷ್ಮಿಯೇ ಅವಳು. ಶ್ರೀರಂಗನಾಥನನ್ನು ಅಗಲಿರಲಾರಳು' ಎಂಬುದು ವೇದ್ಯವಾಯಿತು. ಆಂಡಾಳ್ ಆಷಾಢಮಾಸದ ಪುಷ್ಯಾ ನಕ್ಷತ್ರದಲ್ಲಿ ಜನಿಸಿದಳು (ಕಾಣಿಸಿಕೊಂಡಳು). ಶ್ರೀರಂಗನಾಥನ ಸೇವೆಯನ್ನು ಮಾಡಿ ಧನುರ್ಮಾಸದಲ್ಲಿ 'ತಿರುಪ್ಪಾವೈ' ಎಂಬ ಗೀತೆಯನ್ನು ರಚಿಸಿದಳು. ಬೆಳಗಿನ ಝಾವದಲ್ಲಿ ಎದ್ದು, ಎಲ್ಲ ಭೋಗ ಭಾಗ್ಯವನ್ನು ತೊರೆದು ರಂಗನಾಥನ ಸೇವೆಯನ್ನು ಮಾಡಿ ಪಾವನರಾಗಿ ಎಂಬುದೇ ಇದರ ತಿರುಳು. ಮತ್ತೊಂದು "ನಾಚ್ಚಿಯಾರ ತಿರುಮೊಳಿ" ಇದನ್ನು "ನಾಯಕೀಗೀತೆ" ಎಂದು ಆಕೆ ಹೇಳುವಳು. ಅದರಲ್ಲಿ ರಂಗನಾಥನ ಪ್ರೇಯಸಿಯಾಗಿ ಅವನನ್ನು ಅಗಲಿರಲಾರದೆ, ಅವನಲ್ಲೇ ಐಕ್ಯವಾಗುವುದು ಚಿತ್ರಿತವಾಗಿದೆ.

ಅಂದದ ಮಾಲೆಯ ಚೆಂದವನು
ಆನಂದದಿ ಕಂಡಳು ಮುಕುರದೊಳು
ಹರಿಗಿದು ಸಮನೆಂದತಿ ಮುದದಿ
ಇಡುತಿರೆ ಪುಟ್ಟಿ ಯೊಳನುದಿನವು

ಕಂಡರು ಕುವರಿಯ ಅನುಚಿತವ
ಖೇದದಿ ಮನದಲಿ ಪರಿತಪಿಸಿ
ಹರಿಯೊಳು ಖೇದವ ಬಿನ್ನೈಸೆ
ನೀಡಿದ ನಾಣತಿ ಈಪರಿ ತಾ

"ಗೋದೆಯು ಮುಡಿದಿಹ ಮಲ್ಲಿಗೆಯು
ಪ್ರಿಯವದು ಎನಗಾ ಮಾಲೆಯದು
ಭಕ್ತಿಯ ಕುಸುಮದ ಮಾಲೆಯನು
ಆದರದಿಂದಲಿ ಮುಡಿಯುವೆನು"

ನೀಗಿತು ಶಂಕೆಯು ಕುವರಿಯೊಳು
ಮೂಡಿತು ಭಕುತಿಯ ಭಾವವು ತಾ
ಹರಿಯ ಸಾಯುಜ್ಯವ ಪಡೆಯದೆ ತಾ
ನಿಲ್ಲದು ಗೋದೆಯ ಆತ್ಮವದು

ಪರಿಪರಿ ವಿಧದಲಿ ನುತಿಸುವಳೊ
ಕರೆದರು ಬರದಾ ರಂಗನನು
"ಭಕ್ತಳ ಮೊರೆಯನು ಕೇಳದ ನೀ
ಮೂಕನೊ ಕಿವುಡನೊ ಕಾಣೆನು ನಾ

ಶ್ರೀಮತಿ ಕೆ. ಆರ್. ಕಮಲಮ್ಮ

ಏಕೀ ಪರಿಯಲಿ ನಿಂದಿಹೆಯೋ
ತಿಳಿಯದು ನಿನ್ನಯ ಆತ್ಮವದು
ಸಲ್ಲದು ನಿನಗೀ ನಾಮವದೂ
ಆಶ್ರಿತ ವತ್ಸಲನೆಂಬುವುದು"

ಭಕುತಿಯು ಪ್ರೇಮದ ರೂಪದೊಳು
ಹಾಡಿದಳ್ ನಾಯಕಿ ಗೀತೆಯನು
ಒಲಿದನು ಶ್ರೀಹರಿ ಪ್ರೇಮದೊಳು
ಮಣಿದನು ಗೋದೆಯ ಸಿರಿನುಡಿಗೆ

ಏಳೇಳು ಹುಟ್ಟಿಗು ಗೋವಿಂದ
ನಿನ್ನೊಡ ನಾಡಿಗಳಾವಾಗಿ
ಸೇವೆಯ ಗೈಯುವೆವ್ ಸೇವಕರಾಗಿ
ನಶಿಸಲಿ ಎಮ್ಮಯ ಕಾಮಕ್ರೋಧಾದಿಗಳು

ಕುವರಿಯ ಮನದಳಲಿಗೆ ತಾ
ನಿತ್ತರು ಪಿರಿಯರು ಆಶ್ವಾಸನೆಯನು
ಯುಗದೊಳು ದ್ವಾಪರವಾದರೆ ತಾ
ಶ್ರೀಹರಿ ನಿನ್ನೊಳು ನಲಿಯುವನು

ಸಕಲವು ಗೋಕುಲ ಮಯವಾಯ್ತು
ಸಖಿಯರೆ ಗೋಪಿಯರೆಲ್ಲಾಗಿ
ಪಾಡಿದಳ್ ಪುಣ್ಯದೊಳ್ ಅನುದಿನವೂ
ನೀಡಿದಳ್ ಜನತೆಗೆ ತಿರುಪ್ಪಾವೈಯನು.

(23ನೇ ಪುಟ ನೋಡಿ)



# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನು ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್. ಶ್ರೀಕಂಠಯ್ಯ
ಶ್ರೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125. 9ನೇ ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸಿ. ಭಟ್
ಉಪಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳಿ ಬುರುಜು ಹಿಂಭಾರದಗಸ್ತಿ
ಬಿಜಾಪುರ.

ಎಸ್. ಮೂಡಲಗಿರಿರಾಜ
S/oಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
C/o ಡಿ.ಎನ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ
ಹುಲಿಕಲ್ಲು,ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಿಕರ್ತರು.ಓಲ್ಡ್‌ಟೌನ್
ಭದ್ರಾವತಿ.

ಎ.ಎಂ. ಶ್ರೀನಿವಾಸ್
ವಿನಾಯಕ ಟೈಲರ್ಸ್ ದೊಡ್ಡಪೇಟೆ
ಕೋಲಾರ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎನ್. ಮುಕುಂದ
1275,ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ
ಎನ್.ಎ. 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ. ಸಾರಂಗಪಾಣಿ. ರೋಜರ್ಸ್ ಕ್ಯಾಂ
ಬಿ.ಪಿ. ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ವೆಲ್‌ಫೇರ್ ಆಫೀಸರ್. ತಿ.ತಿ.ದೇ. ತಿರುಪ**

# ವಾರಣ ಮಾಯಿರಂ

(ಆಂಡಾಳ್ ಕಂಡ ಕನಸಿನ ಕನ್ನಡಾವತರಣ)

ವಾರಣವು ಸಾಸಿರದಿ ಬಳಸಿ ಬರೆ
ನಾರಣನು ಗುಣವಂತನೈತರುವನೆಂದು
ಪೂರವಿಸಿ ಪೊಂಗೊಡವನೆತ್ತಿ ತರೆ
ತೋರಣವಿ ಪುರವೆಲ್ಲ ನಲಿಯುವಾ
ಕನಸೊಂದ ಸಖಿ ಕಂಡೆ ನಾನು ॥ ೧ ॥

ವೈವಾಹಮಂ ನಿಶ್ಚಯಿಸಿ ನಾಳೆಗೆಂದು
ಹೊಂಬಾಳೆ ತುರುಗಿರ್ದ ಚಪ್ಪರದೊಳಂದು
ನರಸಿಂಹ ಮಾಧವನು ಗೋವಿಂದ–
ನೆಂಬೊರ್ವ ಯುವಕತಾ ನೊಳವುಗಲು
ಕನಸೊಂದ ಸಖಿ ಕಂಡೆ ನಾನು ॥ ೨ ॥

ಇಂದಿರನೆ ಮೊದಲಾದ ಸುಗವೃಂದ
ಬಂದಿರಲು ಮದುಮಗಳು ನಾನೆಂದು ನುಡಿಯೆ
ಚಂದದಿಂ ನಾದಿನಿಯು ಉಡೆಯುಡಿಸಿ
ಬಂಧುರದ ಮಾಲೆಯನು ಸೂಡುವಾ
ಕನಸೊಂದ ಸಖಿ ಕಂಡೆ ನಾನು ॥ ೩ ॥

ನಾಲ್ದಡಲ ನಲ್ನೀರಿನೊಳು ಮಿಂದು
ನಾಲ್ವೇದ ಪಾರಗರು ಕೊರಲೆತ್ತಿ ಪರಸೆ
ನರುಗಂಪು ಮಾಲೆಗಳ ಪಾವನಗೆ
ನೆರೆ ಸೂಡಿ ಕಂಕಣವ ಕಟ್ಟುವಾ
ಕನಸೊಂದ ಸಖಿ ಕಂಡೆ ನಾನು ॥ ೪ ॥

ಬೆಂಗದಿರ ದೀವಿಗೆಯ ಕೈವಿಡಿದು
ಹೊಂಗಳಸ ಹೊತ್ತು ತರೆಯುಂಗನೆಯರಾಗ
ಹೊಂಗದಿರ ಪಾದುಕೆಯ ಮೆಟ್ಟಿತಾ
ಜಗವದಿರೆ ನಡೆತರುವ ಕೃಷ್ಣನಾ
ಕನಸೊಂದ ಸಖಿ ಕಂಡೆ ನಾನು ॥ ೫ ॥

ಮದ್ದಳೆಯು ಬಾಜಿಸಲು ಶಂಖದಾ
ಸದ್ದೆದ್ದು ಮುತ್ತಿಡಿದ ಚಪ್ಪರವು ನಡುಗೆ
ಮುದ್ದು ಮೈದುನತನದ ಮಧುಸೂದನ–
ನೆದ್ದು ಕೈವಿಡಿದು ದಯಗೆಯ್ದು
ಕನಸೊಂದ ಸಖಿ ಕಂಡೆ ನಾನು ॥ ೬ ॥

ವೈದಿಕರು ಮಂತ್ರಗಳನುಚ್ಚರಿಸಿ
ಸಾದರದಿ ಸಮಿತ್ಕುಶಂಗಳನಗ್ನಿಯಂ ಪೂಜಿಸೆ
ಕಾಯ್ದು ಕುದಿವಾನೆಪೊಲು ನಡೆದೆನ್ನ
ಮಾಧವನು ಕೈಪಿಡಿದು ಬಳಸಿ ಬರೆ
ಕನಸೊಂದ ಸಖಿ ಕಂಡೆ ನಾನು ॥ ೭ ॥

ಎಮ್ಮೇಳೇಳು ಜನ್ಮಕ್ಕು ಕಾರಣನು
ಎಮ್ಮೊಡೆಯ ನಾರಣನು ಕಣ್ಣಪ್ಪನವನು
ತಾಮರೆಯ ಕೈಯಿಂದ ಕಾಲ್ಪಿಡಿದು
ಅಮ್ಮಿಯನು ಮೆಟ್ಟಿಸಲು ದಯಗೆಯ್ಯೆ
ಕನಸೊಂದ ಸಖಿ ಕಂಡೆ ನಾನು ॥ ೮ ॥

ಕುಡುವುರ್ವ ಪೊಗರುಗುವ ಮೊಗವುಳ್ಳ
ಒಲವಿನಾ ಸೋದರನು ಪಾವಕನನುರುಚಿ
ಅಳವಳಿದ ಅಚ್ಯುತನ ಕರಪುಟದ
ನಡುವೆನ್ನ ಕರವಿಟ್ಟು ಅರಳಿಡಲು
ಕನಸೊಂದ ಸಖಿ ಕಂಡೆ ನಾನು ॥ ೯ ॥

ಸಿರಿಗಂಧ ಕುಂಕುಮವ ಪೂಸಣಿಸಿ
ಗಜವೇರಿ ಬೀದಿಯಲಿ ಮೆರವಣಿಗೆ ಬರಲು
ನೆರೆಯೆರಚಿ ಓಕುಳಿಯ ಮಜ್ಜನವಿ
ಮೆರೆವೆಮ್ಮ ವೈವಾಹದುತ್ಸವದ
ಕನಸೊಂದ ಸಖಿ ಕಂಡೆ ನಾನು ॥ ೧೦ ॥

ತಿರುವಿಲ್ಲಿಪುತ್ತೂರ ಹಿರಿಯನಾ
ವರಗುವರಿ ಗೋದೆ ಗೋವಳಿಗ ಕೃಷ್ಣಂಗೆ
ಅರಸಿ ತಾನಾಗಿ ಕನಸೊಂದರಲಿ
ಗೀತೆಯಿದ ಪಾಡಲ್ಕೆ ಬಲ್ಲವರು
ನಲಿಯುವರು ನಲ್ಮಕ್ಕಳೊಡನೆ ॥ ೧೧ ॥

## ಕಡಬಂ ದೊರೆಸ್ವಾಮಿ ಅಯ್ಯಂಗಾರ್

(21ನೇ ಪುಟದಿಂದ)

ಮುಡಿಸಿದರ್ ಕೊಂಡೆಯ ಗೆಳತಿಯರು
ತಿದ್ದಿದರ್ ತಿಲಕವ ನಂದದಲಿ
ಪಿಡಿವಳು ಮಾಲೆಯ ಶ್ರೀರಂಗನಿಗೆ
ಬಾಗಿದ ಶಿರವನು ಭಕುತಳಿಗೇ

ಭಕ್ತಿಯು ಮುಕ್ತಿಯ ಸಾಧನವು
ಅರುಹಿದಳ್ ಜನತೆಗೆ ಗೋದೆಯು ತಾ
ಹರಿಯನು ಸೇವಿಸಿ ಆತ್ಮವನರ್ಪಿಸಿ
ಮುಕ್ತಿಯ ಪೊಂದಿದಳ್ ಗೋದೆಯು ತಾ

ಮಂಗಳವಾಗಲಿ ಶ್ರೀ ರಂಗನಿಗೆ
ಮಂಗಳ ರಂಗನ ಭಕುತಳಿಗೆ
ಮಂಗಳವಾಗಲಿ ಭಕ್ತಳ ಭಕುತರಿಗೆ
ನಮಿಪೆನು ಶ್ರೀಹರಿ ಗೋದೆಗೆ ನಾ

(1ನೇ ಪುಟದಿಂದ)

ಸಂತ ಪರಂಪರೆ ಯಾವ ಒಂದು ಭಾಷೆಯದೂ ಅಲ್ಲ. ಆದರೆ ಅದು ದೇಶವ್ಯಾಪೀ ಸಾಹಿತ್ಯದ ಒಂದು ಉಜ್ವಲ ವಿಚಾರ ಧಾರೆ. ಅದು ಉನ್ನತ ಮತ್ತು ಭವ್ಯಜೀವನ ದರ್ಶನದ ಸಾಕ್ಷಾತ್ಕಾರ ವನ್ನುಂಟುಮಾಡುತ್ತದೆ. ಅದರಲ್ಲಿ ಭಾರತದ ಆತ್ಮವಿಕಾಸದ ಎಡೆಬಿಡದ ಚಿಂತನೆಯನ್ನು ಕಾಣು ತ್ತೇವೆ. ಭಾರತೀಯ ಸಂತ ಪರಂಪರೆಯ ಉಜ್ವಲ ವಿ ಚಾ ರ ಧಾ ರೆ ಮಾನವ ಜೀವನದ ಸರ್ವಾಂಗೀಣ ವಿಚಾರ ಮಾಡುತ್ತದೆ. ಅದರಲ್ಲಿ ಮಾನವ ಮತ್ತು ದೈವ ಮಾನವರನ್ನು ಕುರಿತ ಅಖಂಡಪ್ರೇಮವಿದೆ. ಸಂತ ಪರಂಪರೆಯ 'ದೇವ ಮಾನವ' ಸಂಜ್ಞೆಯು ವಿಶಾಲವೂ ಮತ್ತು ವ್ಯಾಪಕವೂ ಆಗಿದೆ. ಜ್ಞಾನದೇವ, ತುಲಸೀ, ಕಬೀರ, ಸೂರ, ಆಳ್ವಾರರು, ಚಕ್ರಧರ, ನರಸೀ ಮೆಹತಾ, ಸಾಧುವಾಸವಾನೀ,ಶಂಕರಾಚಾರ್ಯ, ಚೈತನ್ಯ, ನಾಗರ್, ಬಸವ ಹಾಗೂ ದಾದೂ ಮತ್ತು ಸಂತನಾಭಾ – ಮೊದಲಾದವರು ದೇವ ಮಾನವರ ಶ್ರೇಣಿಯಲ್ಲಿ ಬರುತ್ತಾರೆ. ಇದೇ ರೀತಿ ಮೀರಾ, ಕಾನ್ಹೋಪಾತ್ರ, ಮುಕ್ತಾಯಿಯು ಗಣನೆಯೂ ಸಹ ಸಂತರೊಡನೆಯೇ ಆಗುತ್ತದೆ. ಅಂದರೆ, ಸಂತ ಪರಂಪರೆ ಸ್ತ್ರೀ, ಪುರುಷ, ವರ್ಣ, ಜಾತಿ, ಭಾಷೆ ಮೊದಲಾದ ಯಾವ ಭೇದವನ್ನು ನೋಡುವುದಿಲ್ಲ. ಸ್ವಾಮಿ ವಿವೇಕಾನಂದರು ಎಷ್ಟು ವಂದನೀಯರೋ, ಗುರುನಾನಕರೂ ಅಷ್ಟೇ ವಂದನೀಯರು. ಮೀರಾಬಾಯಿಗೆ ಇರುವ ಸ್ಥಾನವೇ ನಾಮದೇವ, ಏಕನಾಥರಿಗೂ ಇದೆ. ಸಂತರು ವ್ಯಾಪಕರೂಪದಲ್ಲಿ ಪ್ರೇಮ, ಸದ್ಭಾವ, ಶ್ರದ್ಧೆ, ಮಮತೆ ಮತ್ತು ಸತ್ಸಂಗದ ಮಹಿಮೆ ಯನ್ನು ಮತ್ತೆ-ಮತ್ತೆ ಸ್ಪಷ್ಟಪಡಿಸಿದ್ದಾರೆ.

ಸಂತರು ಮಾನವ ಮತ್ತು ತಮ್ಮ ಬಾಂಧವ ರಲ್ಲಿ ವಿರೋಧ ಅಥವಾ ಘರ್ಷಣೆಗಳನ್ನು ಎಂದಿಗೂ ಉಂಟುಮಾಡುವುದಿಲ್ಲ. ಮತ್ತು ಕ್ಷುದ್ರವಾದ ಸ್ವಾರ್ಥಕ್ಕಾಗಿ ಎಂದಿಗೂ ಭಾಷಾಭೇದ, ಪ್ರಾಂತ ಭೇದ, ಧರ್ಮಭೇದ ಮಾಡಿಲ್ಲ. ಅದಕ್ಕೆ ಬದಲಾಗಿ ಅವರು ಎಲ್ಲರನ್ನು ಹೃದಯಪೂರ್ವಕವಾಗಿ ಪ್ರೀತಿ ಸಿದರು. ಗುರುಗೋವಿಂದ ಸಿಂಗರು ದಕ್ಷಿಣಕ್ಕೆ ಹೋದರೆ, ಸಮರ್ಥ ರಾಮದಾಸರು ಅವರನ್ನು ಭೇಟಿಯಾಗಲು ಹೋದರು. ಮತ್ತೆ ಅವರ ಕೆಲಸ ನಿರ್ವಹಿಸಿದರು.

ಯಾವುದೇ ಸಂತರ ಪರಂಪರೆ ಅಥವಾ ಅದರ ಸಂಪ್ರದಾಯವಾಗಲೀ ಯಾವುದೇ ಒಂದು ಪ್ರದೇಶಕ್ಕೆ ಸೀಮಿತವಾಗಿ ಎಂದಿಗೂ ಉಳಿಯಲಿಲ್ಲ. ಇಂದಿಗೂ ಆ ರೀತಿಯಾಗಿಲ್ಲ. ನಾಮದೇವರ ಗಣನೆ ಜ್ಞಾನೇಶ್ವರ ಪರಂಪರೆಯಲ್ಲಿ, ಜಾಲಂಧರು, ಗೋರಕ್ಷ ಮತ್ತು ಮತ್ಸ್ಯೇಂದ್ರರು ಕಬೀರ್ ಪರಂ ಪರೆಯಲ್ಲಿ ಬರುತ್ತಾರೆ. ಮಲ್ಲಾಪ್ಪಾ ವಾಸಕರ್ ಮೂಲತಃ ವೀರಶೈವರಾದರೂ ವಾರಕರೀ ಆಗಿದ್ದರು. ಏಕನಾಥರು ವಾರಕರೀ ಆಗಿದ್ದರೂ. ದತ್ತ ಸಂಪ್ರದಾಯಿಗಳಾಗಿದ್ದರು. ಸಿಖ್ಖರ ಧರ್ಮ ಗ್ರಂಥ "ಗ್ರಂಥ ಸಾಹೇಬ"ದಲ್ಲಿ ಸಂತ ನಾಮ ದೇವರ ಗೌರವ ಪೂರ್ಣ ಉಲ್ಲೇಖ ಅವರ ಪದಾ ವಳಿಯ ಜತೆಯಲ್ಲಿ ಬರುತ್ತದೆ. ಶೇಕ ಮಹಮ್ಮದ್ ಸೂಫಿಯಾಗಿದ್ದರೂ ಸಹ ಪರಮ ವಿಠಲ ಭಕ್ತರಾಗಿದ್ದರು. ಇದೇ ರೀತಿ ಎಲ್ಲಾ ಮರಾಠೀ ಸಂತರೂ ರೈದಾಸ್, ಸೂರ್‌ದಾಸ್, ದಾದೂ, ನಾನಕ್ ಮತ್ತು ಮೀರಾರ ಉಲ್ಲೇಖ ಮಾಡಿದ್ದಾರೆ. ಇಷ್ಟು ಮಾತ್ರವಲ್ಲ, ನಾಭಾಜಿ ಯವರ 'ಭಕ್ತಮಾಲಾ' ಎಂಬ ಗ್ರಂಥವನ್ನು ಎದುರಿಗೆ ಇಟ್ಟುಕೊಂಡು ಮಹಾಪತಿಯು ಮರಾಠಿ ಸಂತರ ಜೀವನಚರಿತ್ರೆಯನ್ನು ಬರೆದಿದ್ದಾರೆ. ಅವರ ಗ್ರಂಥದಲ್ಲಿ ಅನೇಕ ಹಿಂದೀಭಕ್ತರ ಕಥೆಗಳೂ ಸಹ ಬಂದಿವೆ.

ಇದೇ ದೇಶದ ಪುಣ್ಯಕ್ಷೇತ್ರಗಳ ದರ್ಶನ ಮಾಡಿ, ಎಲ್ಲಾ ಪ್ರದೇಶದ ಸಂತರೊಡನೆ ಸತ್ಸಂಗ ಬೆಳಸಿ, ಹಾಗೆಯೇ ಜನಭಾಷೆಗಳಲ್ಲಿ ರಚನೆಗಳನ್ನು ಮಾಡಿ ಸಂತರು ಶತಮಾನಗಳಿಂದ ಭಾರತದ ಸಾಂಸ್ಕೃತಿಕ ಐಕ್ಯತೆಯನ್ನು ಉದ್ಘೋಷಿಸಿದ್ದಾರೆ.

*

---

# ಗುರುವಿನ ಗರಿಮೆ

ಬಾಲಸ್ಯ ವಾ ವಿಷಯ
ಭೋಗರತಸ್ಯ ವಾಪಿ
ಮೂರ್ಖಸ್ಯ ಸೇವಕ
ಜನಸ್ಯ ಗೃಹಸ್ಥಿತಸ್ಯ ।
ಏತದ್ಗುರೋಃ ಕಿಮಪಿ
ನೈವವಿಚಿಂತನೀಯಂ
ರತ್ನಂ ಕಥಂ ತ್ಯಜತಿ
ಕೋಪ್ಯಶುಚೌ ಪ್ರವಿಷ್ಟಮ್ ”

ಅವಧೂತಗೀತೆ - 2-

ಬ್ರಹ್ಮಪಥವನ್ನು ತೋರಿಸುವ ಗುರುವು ಬಾಲಕನಾಗಿರಬಹುದು. ಐಹಿಕ ಇಂದ್ರಿಯಕ ಭೋಗಗಳಿಗೆ ಮನಸ್ಸು ಕೊಟ್ಟವನಾಗಿರಬಹುದು, ಮೂರ್ಖನಾಗಿ ಎಂದರೆ ಹಟಪ್ರವೃತ್ತಿಯುವನಾಗಿರಬಹುದು. ಸೇವಕನೋ ಗೃಹಸ್ಥನೋ ಆಗಿರ ಬಹುದು. ಆದರೂ ಇಂತಹ ಈತನಲ್ಲಿ ಅಧ್ಯಯನ ಮಾಡುವುದು ಯುಕ್ತವೇ ಎಂದು ಚಿಂತಿಸಬೇಕಾಗಿಲ್ಲ. ಏಕೆಂದರೆ ಕೊಳಕಿನಲ್ಲಿ ಬಿದ್ದಿದೆಯೆಂದು ಬೆಲೆಯುಳ್ಳ ರತ್ನವನ್ನು ಯಾರು ತಾನೆ ಎತ್ತಿಕೊಳ್ಳದೆ ಬಿಡುತ್ತಾರೆ.

(ದತ್ತಾತ್ರೇಯ – ಸ. ವೆಂಕಟಾಚಲಪತಿ)

ಮೂರು ಗುಣ ಮೂರು ರೂಪಗಳೊಂದಾಗಿ
ಮೂರೂರಿನಲಿ ನೆಲಸಿ ಮೂರು ಕ್ಷೇತ್ರಗಳಮಾಡಿ
ನೂರಾರು ನೊಂದಹೃದಯಗಳ ತಣಿಸುತಿರುವ
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೭ ||

ಚಿಂತಿಸುವುದನು ಕೊಡುವದದು ಚಿಂತಾಮಣಿಯು
ಚಿಂತಿಸದೆ ಕೊಡುತಿರುವೆ ಸಕಲ ಸಂಪದವನು
ಇಂತಿರುವ ಮಣಿಯೊಂದಿಲ್ಲ ಸಕಲ ಲೋಕಗಳಲೂ
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೮ ||

ಗುರುಚರಿತೆಯನೋದಿದ ಮಾತ್ರದಿಂ ನರಜನ್ಮದ
ದುರಿತ ತಾಪತ್ರಯಗಳೆಲ್ಲವೂ ಪರಿಹಾರ
ಸುರತರುವಿಗಿದು ಸಮವು ಸಕಲವಿಧದಿಂದ
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೯ ||

ನೀನೆ ಪಾವನ ಮೂರ್ತಿಯಾಗಿ ನಿಂತಿರುವಿಯಲ್ಲಾ
ನಾನೇಕೆ ಮಾಡಲಿನ್ನು ತೀರ್ಥಯಾತ್ರೆಗಳನೆಲ್ಲಾ
ಸಾನುರಾಗದಿಂ ಭಜಿಪ ಮನವನೀಡೆನಗೆ ದೇವಾ
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೧೦ ||

ನರರೆಲ್ಲ ಭವರೋಗದಿಂ ಬಳಲುತಿರಲು
ನರಹರಿರಾಯ ನೀನೇ ಭವರೋಗವೈದ್ಯನಾಗಲು
ನರರಿಗೆಲ್ಲಿದೆಯಿನ್ನು ಭವರೋಗ ಭಯವು
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೧೧ ||

ನಿನ್ನ ನಾಮವೇ ಜಪವು ನಿನ್ನ ಧ್ಯಾನವೇ ತಪವು
ನಿನ್ನ ಪಾದೋದಕದಿಂದಲೇ ದೇಹ ಶುದ್ಧಿಯು
ಇನ್ನು ಕಾಶಿ ರಾಮೇಶ್ವರ ಗಂಗೆ ತುಂಗೆಗಳೇಕೆ ರಾಯಾ
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೧೨ ||

ಯಾಗ ಯಜ್ಞಗಳನರಿಯದ ಮೂಢಮತಿ ನಾನು
ತ್ಯಾಗ-ತತ್ತ್ವಗಳನರಿಯದ ವಿಷಯಮತಿ ನಾನು
ರಾಗದಿಂ ಭಜಿಪೆ ನಿನ್ನನು ಬೇಗದಿಂ ಹರಸು
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೧೩ ||

ಉಪಮೆಯೆಂ ಬಣ್ಣಿಸಲದಳವು ನೀನು
ಉಪಮಾತೀತ ನಿರ್ಗುಣ ರೂಪ ನೀನು
ಪಾಪ! ಸೋತಿಹವು ಆಗಮಗಳು ನಿನ್ನಹಾಡಿ
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೧೪ ||

ಸಾಗರವ ಮಸಿಮಾಡಿ ಗಗನ ಕಾಗದವಾಗಿಸಿ
ನಾಗರಾಜನೇ ಬರೆದರೂ ಸಾಲದು ನಿನ್ನ ಮಹಿಮೆ
ಹೇಗೆ ಹಾಡಲಿ ದೇವ ದೀನ ನಾನಾಗಿರುವೆ
ಸುಪ್ರಭಾತವು ನಿನಗೆ ಶ್ರೀ ದತ್ತ ಗುರುರಾಯಾ || ೧೫ ||

ಮಂಗಳವು ಶ್ರೀ ದತ್ತ ಗುರರಾಯನಿಗೆ
ಮಂಗಳವು ಶ್ರೀ ಪಾದವಲ್ಲಭ ಯತಿವರಗೆ
ಮಂಗಳವು ಶ್ರೀ ನರಸಿಂಹ ಸರಸ್ವತಿಗೆ
ಶುಭ ಮಂಗಳವು ಅನಸೂಯ ತನಯನಿಗೆ
ಜಯತು ಜಯ ಮಂಗಳವು ದತ್ತಾತ್ರೇಯನಿಗೆ || ೧೬ ||

॥ ಸಮಾಪ್ತಿ ॥

---

(16ನೇ ಪುಟದಿಂದ)

ಹೃದಯದಲ್ಲಿ ಪರಬ್ರಹ್ಮಮೂರ್ತಿ ಮೂಡಿದಂತಾಯಿತು. ಗುರುಗಳು ವರದ ಹಸ್ತವನ್ನಿಡಲು ರುಕ್ಮಾಂಗದರಿಗೆ ಷೋಡಶಕಲೆಗಳೂ ಪ್ರಾಪ್ತವಾದವು. ಇದರ ಸೌಖ್ಯವನ್ನು ಸಾಧುಸಂತರೇ ಬಲ್ಲರು. ಆನಂದಮಾರ್ಗಪರಂಪರೆಯಲ್ಲಿ ಬಂದ ಇವರಿಗೆ, 'ರುಚಿರಾನಂದ' ರೆಂದು ಆಶ್ರಮನಾಮ ಪ್ರಸಿದ್ಧವಾಯಿತು.

ಆನಂದಮಾನಂದ ಕರಪ್ರಸನ್ನಂ
ಜ್ಞಾನ ಸ್ವರೂಪಂ ನಿಜ ಬೋಧರೂಪಂ
ಯೋಗೀಂದ್ರ ಮೀಡ್ಯಂ ಭವರೋಗ ವೈದ್ಯಂ
ಶ್ರೀ ಸದ್ಗುರುಂ ನಿತ್ಯಮಹಂ ನಮಾಮಿ

ಇದು ಧ್ಯಾನಶ್ಲೋಕವು.

ರು ಕ್ಮಾಂ ಗ ದ ರು (ರುಚಿರಾನಂದರು) ಸಕಲವೇದಾಂತ ತತ್ತ್ವಗಳನ್ನು ಅರಿತವರಾಗಿದ್ದರು. ವೈದ್ಯಕುಲಕ್ಕೆ ಮುಕುರಮಣಿಗಳಾಗಿದ್ದರು. ಇವರು ಸಮುದ್ರದಿಂದ ಉದ್ಭವಿಸಿದ ಧನ್ವಂತರಿಯಂತೆ, ರಾಮಾಯಣಕಾಲದ ಸುಷೇಣನಂತೆ ಇದ್ದರೆಂದು 'ಗುರುವಂಶಾವಳ' ಗ್ರಂಥದಲ್ಲಿ ನಿರೂಪಿತವಾಗಿದೆ. 'ಗುರುಕೃಪಾಸಂಜೀವನಿ'ಯಿಂದ ಎಂತಹ ರೋಗಗಳನ್ನು ಕಳೆಯಬಲ್ಲವರಾಗಿದ್ದರು. ಭವರೋಗವನ್ನೂ ಪರಿಹರಿಸುವ ಈ ಪಂಡಿತರನ್ನು 'ಭವರೋಗಹರವೈದ್ಯ' ರೆಂದು ಕರೆಯುತ್ತಿದ್ದರು.

ಭಾಗವತೋತ್ತಮರಾದ ಇವರು ಶಿಷ್ಯ ದತ್ತೋಪಂತರಿಗೆ ಭಾಗವತ ಧರ್ಮದ ಜ್ಞಾನೋಪದೇಶ ಮಾಡಿದ್ದಾರೆ. ಪ್ರಪಂಚದಲ್ಲಿದ್ದು ಪಾರಮಾರ್ಥವನ್ನು ಸಾಧಿಸುವ ರಹಸ್ಯವನ್ನು ಜನಕೆಗೆ ಅರುಹಿದ್ದಾರೆ.

ಸ್ವತಃ ಜೀವನ್ಮುಕ್ತರಿದ್ದುದಲ್ಲದೆ ಎಷ್ಟೋ ಶಿಷ್ಯರಿಗೆ ತತ್ವೋಪದೇಶ ನೀಡಿ ಮುಕ್ತಿಯದಾರಿಯನ್ನು ತೋರಿದ್ದಾರೆ. ಜೀವ, ಜಗತ್ತು, ಬ್ರಹ್ಮ, ಜ್ಞಾನ, ಕರ್ಮ, ಯೋಗ, ಇವೇ ಮೊದಲಾದ ಆಧ್ಯಾತ್ಮ ವಿಷಯಗಳನ್ನು ಸತ್‌ಶಿಷ್ಯ ರಾಯಾಜಿಪಂತ (ರಾಜೀವಾನಂದ)ರಿಗೆ ತಿಳಿಹೇಳಿದ್ದಾರೆ. ತನ್ಮೂಲಕ ಧರ್ಮ ತತ್ತ್ವಗಳ ಪ್ರಸಾರ ಮಾಡಿದ್ದಾರೆ. ಈ ಸಂಗತಿ ಮರಾಠಿ ಓವಿಯಲ್ಲಿರುವ ಗುರುವಂಶಾವ ಗ್ರಂಥದಲ್ಲಿ ಸವಿಸ್ತಾರವಾಗಿ ನಿರೂಪಿತವಾಗಿದೆ

"ಅಂತರಂಗದಿ ಯೋಗಿಯಾಗಿ, ಬಾಹ್ಯದೇ ವಿವಿಧ ಭೋಗಗಳ ಭೋಗಿಯಾಗಿ, ಎಲ್ಲಲೌಕಿ ಸಂಗದ ತ್ಯಾಗಿಯಾಗಿ, ಲೌಕಿಕಮಾಗ ಮಾರ್ಗದಿ ವಿಹರಿಸಯ್ಯ ರಾಜೀವಾ" ಎಂದ ರಾಜೀವಾನಂದರಿಗೆ ಉಪದೇಶವಿತ್ತರು.

ಶಾ. ಶಕೆ, 1632 ವಿಕೃತಿನಾಮಸಂವತ್ಸ ಫಾಲ್ಗುಣ ಶುದ್ಧ ದ್ವಾದಶಿ ದಿನ ಶ್ರೀರುಕ್ಮಾಂಗ ಗುರುಗಳು ನಿಜಧಾಮವನ್ನು ಸೇರಿದರು. ಆವ ಸಮಾಧಿಯ ಸನ್ನಿಧಿಯಲ್ಲಿ ಸಿದ್ಧಪಾದುಕಾಪೂ ಇಂದಿಗೂ ನಡೆಯುತ್ತಿದೆಯಲ್ಲದೆ ಪ್ರತಿವರ್ಷ ಆರಾಧನಾ ಮಹೋತ್ಸವವನ್ನು ಇಲ್ಲಿಯ ಶ್ರೀ ಗು ಕ್ಮಾಂಗದ ದೇವಸ್ಥಾನ ಸಮಿತಿಯವರು ವಿಜೃ ಣೆಯಿಂದ ಜರುಗಿಸುತ್ತಾರೆ. ಗುರವೇನಮಃ

(14ನೇ ಪುಟದಿಂದ)

ನಾದ ಗರುಡನನ್ನು ವಾಹನವಾಗುಳ್ಳವನು. ಪ್ರಕಾಶವಾಗಿ ಹೊಳೆಯುತ್ತಿರುವ ಚಕ್ರವನ್ನು ಧರಿಸಿರುವವನು. ಸ್ವಭಾವವಾಗಿಯೇ ಇವನು ಸರ್ವರಕ್ಷಕನು. ಆದಿಶೇಷನಿಗೂ, ಗರುಡನಿಗೂ ಅನುರಕ್ತಿವುಂಟಾಗುವ ಹಾಗೆ ಮಾಡಿರುವವನು – ಹೀಗೆ ಆಳ್ವಾರರು ವಿವಿಧ ರೀತಿಯಲ್ಲಿ ಸ್ವಾಮಿಯನ್ನು ಸ್ತೋತ್ರ ಮಾಡಿದ್ದಾರೆ.

ತಿರುಚ್ಚಂದವಿರುತ್ತದ ಕೆಲವು ಪದ್ಯಗಳ ತಾತ್ಪರ್ಯ ಹೀಗಿದೆ–

ಭೂಮಿಯಲ್ಲಿರುವ ಶಬ್ದ, ರೂಪ, ರಸ, ತೇಜಸ್ಸು ಗಂಧ – ಗುಣಗಳಿಗೆ ನಿರ್ವಾಹಕನೂ. ನೀರಿನಲ್ಲಿರುವ ಮೇಲಿನ ಗುಣಗಳಲ್ಲಿ ಗಂಧಗ ವಿನಃ ಉಳಿದ ನಾಲ್ಕು ಗುಣಗಳಿಗೆ ನಿರ್ವಾಹಕನೂ, ತೇಜನಲ್ಲಿರುವ ರಸ, ಗಂಧಗಳ ವಿನಃ ಉಳಿದ ಮೂರು ಗುಣಗಳಿಗೆ ನಿರ್ವಾಹಕನೂ, ಉತ್ಕೃಷ್ಟವಾದ ವಾಯುವಿನಲ್ಲಿರುವ ಶಬ್ದ ಸ್ಪರ್ಶ ಗುಣಗಳಿಗೆ ನಿರ್ವಾಹಕನೂ, ಆಗಿ ಪರಸ್ಪರ ವಿಲಕ್ಷಣವಾದ ಗುಣಗಳಿಗೆ ಆತ್ಮವಾಗಿರುವ ಪರಮಾತ್ಮನೇ! ನೀನಿರುವ ಪ್ರಾಕಾರವನ್ನು ಯಾರು ತಾನೆ ತಮ್ಮ ಪ್ರಯತ್ನದಿಂದ ಗೊತ್ತುಮಾಡಬಲ್ಲರು! ಯಾರೂ ಇಲ್ಲ.

ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹಗಳಿಗೆ ನಿರ್ವಾಹಕನೂ, ಆ ಕ್ರಮಗಳಿಗೆ ಬೇಕಾದ ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರಋತುಗಳಿಗೆ ನಿರ್ವಾಹಕನೂ, ಆಗ್ನೇಯ, ಜ್ಯೋತಿಷ್ಟೋಮ, ವಿಶ್ವಜಿತ್–ಇತ್ಯಾದಿ ಯಜ್ಞಗಳಿಂದ ಆರಾಧಿತನೂ, ಭೂತ, ಮನುಷ್ಯ, ಪಿತೃ, ದೇವ, ಬ್ರಹ್ಮ–ಇತ್ಯಾದಿ ಪಂಚಮಹಾಯಜ್ಞಗಳಿಂದ ಆರಾಧಿತನೂ, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಪ್ರಾಣಾಹುತಿಗಳಿಗೆ ನಿರ್ವಾಹಕನೂ, ಗಾರ್ಹಪತ್ಯ, ಆಹವನೀಯ, ದಕ್ಷಿಣ, ಸಭ್ಯ, ಅನಪತ್ಯ–ಎಂಬ ಪಂಚಾಗ್ನಿಗಳಿಗೆ ಶರೀರಭೂತನೂ, ಮೇಲ್ಮೆಯುಳ್ಳ ಜ್ಞಾನ, ವೈರಾಗ್ಯ ಕೊಡುವಂತಹ ಪರಭಕ್ತಿ, ಪರಜ್ಞಾನ, ಪರಮ ಭಕ್ತಿಗಳನ್ನು ಕೊಡುವವನೂ, ವಿವೇಕ, ವಿಮೋಹ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾದಗಳಿಗೆ ನಿರ್ವಾಹಕನೂ, ಐಶ್ವರ್ಯ, ವೀರ್ಯ, ಜ್ಞಾನ, ಬಲ, ಶಕ್ತಿ, ತೇಜಸ್ಸು–ಇತ್ಯಾದಿ ಆರುಗುಣವುಳ್ಳವನೂ, ಅಪಹತಪಾಪ್ಮ, ವಿಜರ, ವಿಮೃತ್ಯು, ವಿಶೋಕ, ವಿಜಿಗೀಶ, ಅಪಿಪಾಸ, ಸತ್ಯಕಾಮ, ಸತ್ಯಸಂಕಲ್ಪಾದಿ ಗುಣಾಷ್ಟಕವುಳ್ಳವನೂ, ಬಾಹ್ಯ, ಕುದೃಷ್ಟಿಗಳೆಂಬ ಬೇರೆ ಬೇರೆ ಹಲವಾರು ಮತಿಗಳ ಪ್ರವರ್ತಕನೂ, ಸತ್ಯವಾದಿಗಳಿಗೆ ಸತ್ಯನೂ, ಸುಳ್ಳರಿಗೆ ಸುಳ್ಳಾದವನೂ, ಆಗಿ ಗೋಪಾಲಕರ ಗುಂಪಿನಲ್ಲಿ ಬಂದ ಸ್ವಾಮಿಯೇ! ಆಶ್ಚರ್ಯ ಚೇಷ್ಟಿತನೇ! ನಿನ್ನನ್ನು ಯಾರುತಾನೆ ವರ್ಣಿಸಬಲ್ಲರು!

ಪಂಚಭೂತಗಳು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ತನ್ಮಾತ್ರಗಳು, ಪ್ರಕೃತಿ, ಮಹತ್, ಅಹಂಕಾರ, ಮನಸ್ಸು–ಇವೆಲ್ಲವೂ ನೀನೇ ಆಗಿ, ಅಚೇತನಗಳಿಗಷ್ಟೇ ಅಲ್ಲದೆ, ಎಲ್ಲ ಚೇತನರಿಗೂ, ಅಂತರ್ಯಾಮಿಯಾಗಿರುವ, ಎಲ್ಲಕ್ಕೂ ಮೇಲಾಗಿರುವ ಸ್ವಾಮಿಯೇ, ಪರಮಪದದಲ್ಲಿ ನೆಲಸಿರುವ ಪರಮಾತ್ಮನೇ, ಅಪ್ರಾಕೃತ ಪಂಚಶಕ್ತಿಗಳು-ಜ್ಞಾನೇಂದ್ರಿಯ, ಕರ್ಮೇಂದ್ರಿಯ – ಇತ್ಯಾದಿ ಎಲ್ಲಕ್ಕೂ ನಿರ್ವಾಹಕನೂ, ಶಬ್ದಾದಿ ಭೋಗಗಳೈದು, ಭೋಗಸ್ಥಾನ, ಭೋಗೋಪಕರಣ, ಅಮರರು, ನಿತ್ಯಸೂರಿಗಳು, ಮುಕ್ತರು–ಎಲ್ಲರಿಗೂ, ನಿರ್ವಾಹಕನಾದ ನಿನ್ನನ್ನು ಯಾರು ತಾನೆ ತಿಳಿಯಬಲ್ಲರು!

ಪರವಾಸುದೇವ ಮಂಗಳ ವಿಗ್ರಹಯುಕ್ತನಾಗಿ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೆಂಬ ಮೂರು ವ್ಯೂಹಮೂರ್ತಿಯಾಗಿ, ಪರವಾಸುದೇವನನ್ನೂ ಕೂಡಿ ನಾಲ್ಕು ಮೂರ್ತಿಯಾಗಿ ಅನುಗ್ರಹಾಧಿಕ್ಯವಾದ, ಸರ್ವಪ್ರಧಾನವಾದ, ಭೋಗ್ಯವಾದ ವಿಭವಮೂರ್ತಿಯಾದ, ಪರಮಪದದಲ್ಲಿ ನಿತ್ಯಾನುಭವಹೆಗ್ಗಳಿಕೆಯಿಂದ ಬೆಳಗುತ್ತಿರುವ, ಜಗತ್ತಿನಲ್ಲಿ ಭೋಗ್ಯವಾದ ಭಾಗ್ಯಾಧಿಕ ಸುಕೃತವಾದ ವಿಭವಮೂರ್ತಿಯುಳ್ಳ ಅಸಂಖ್ಯಾತ ಸಜಾತೀಯ ಮೂರ್ತಿಯಾಗಿ, ನಾಗಪರ್ಯಂಕದಲ್ಲಿ ಹೇಗೆ ಕೂಡುವನು? ಪ್ರಳಯಕಾಲ ಹಿರಿಮೆಯುಳ್ಳ ಸ್ವಾಮಿಯು ಆದಿಶೇಷ ಪರ್ಯಂಕದಲ್ಲಿ ನಿದ್ರಿಸಿ, ಅನಂತರ ಆಶ್ರಿತರಿಗೆ ಅದೇ ರೀತಿಯ ಅರ್ಚಾಮೂರ್ತಿಯಾಗಿ ಅವತರಿಸಿದ ಸ್ವಭಾವವೋ ಎನ್ನುವಂತಿದೆ. ಹೀಗೆ ಸ್ವಾಮಿಯು ಎಲ್ಲಕ್ಕೂ ಕಾರಣಭೂತಶೇಷಿಯಾಗಿದ್ದಾನೆ.

ಇಪ್ಪತ್ತನಾಲ್ಕು ತತ್ತ್ವಗಳಿಗೆ ನಿರ್ವಾಹಕನಾಗಿ, ವಿಲಕ್ಷಣವಾದ ಸಪ್ತದ್ವೀಪಗಳಿಗೂ, ಸಪ್ತ ಸಾಗರಗಳಿಗೂ, ಸಪ್ತ ಕುಲಪರ್ವತಗಳಿಗೂ ನಿರ್ವಾಹಕನಾಗಿ ದ್ವಾದಶಾದಿತ್ಯರಿಗೆ ಆತ್ಮವಾಗಿರುವ ಪರಮಪುರುಷನನ್ನು ಅಷ್ಟಾಂಗಪ್ರಣಾಮವಿಧಿಯಂತೆ ಪ್ರಣಾಮಮಾಡಿ ಭಗವದ್ವಾಚಕ ಅಷ್ಟಾಕ್ಷರೀಮಂತ್ರವನ್ನು ಅನುಸಂಧಾನ ಮಾಡುವವರು ಪರಮಪದವನ್ನು ಆಳಬಲ್ಲವರಾಗುತ್ತಾರೆ.

ಕೂರ್ಮಾವತಾರದಲ್ಲಿ ಕಡೆಯಲ್ಪಟ್ಟ ಭೂಮಿ, ಕ್ಷೀರಸಮುದ್ರದಲ್ಲಿ ನಿದ್ರಿಸಿ, ಕಾಲನೇಮಿಯೆಂಬ ಅಸುರನನ್ನು ಕೊಂದು ನಡುಗುತ್ತಿದ್ದ ವಾಲಿಯ ತಮ್ಮ ಸುಗ್ರೀವನಿಗೆ ಉಪಕಾರಮಾಡಲು ಶ್ರೀರಾಮನಾಗಿ ಅವತರಿಸಿ, ಒಂದೇ ಸಾಲಿನಲ್ಲಿದ್ದ ಸಪ್ತಸಾಲ ಮರಗಳಲ್ಲಿ ಒಂದೇ ಬಾಣದಿಂದ ರಂಧ್ರಮಾಡಿ, ತಿರುಮಲೆಯಲ್ಲಿ ಬಿಜಯಮಾಡಿರುವ ಪರಮಾತ್ಮನ ಪಾದಕಮಲಗಳನ್ನು ಆಶ್ರಯಿಸಿ ಉಜ್ಜೀವನ ಹೊಂದಿದೆನು. (81 ನೇ ಪದ್ಯ).

ಹೀಗೆ ತಿರುಚ್ಚಂದವಿರುತ್ತದ ಪದಗಳು ಸಂಖ್ಯಾರೂಪವಿವರಣ ಹೊಂದಿ ಅದ್ಭುತರೀತಿಯ ಅರ್ಥ ಹೊಂದಿವೆ ಹಾಡುವದಕ್ಕೆ ಸೊಗಸಾದ ತಾಳ ಲಯ ಬದ್ಧವಾಗಿವೆ—

ಶಕ್ತಿಪಂಚ ವಿಗ್ರಹಾತ್ಮನೇ
ಶುಕ್ತಿಹಾರ ಜಿತ ಚಿತ್ತಹಾರಿಣೇ ।
ಮುಕ್ತಿದಾಯಕ ಮುರಾರಿ ಪಾದಯೋ
ಭಕ್ತಿಸಾರಮುನಯೇ ನಮೋ ನಮಃ ॥

"ನಮಸ್ತೆ ಅಸ್ತು ಭಗವನ್ ವಿಶ್ವೇಶ್ವರಾಯ ಮಹಾದೇವಾಯ ತ್ರ್ಯಂಬಕಾಯ ತ್ರಿಪುರಾಂತಕಾಯ ತ್ರಿಕಾಗ್ನಿಕಾಲಾಯ ಕಾಲಾಗ್ನಿರುದ್ರಾಯ ನೀಲಕಂಠಾಯ ಮೃತ್ಯುಂಜಯಾಯ ಸದಾಶಿವಾಯ ಸರ್ವೇಶ್ವರಾಯ ಶಂಕರಾಯ ಶ್ರೀಮನ್ಮಹಾದೇವಾಯ ನಮಃ"

ಶ್ರೀರಂಗಪಟ್ಟಣದ

# ಗಂಗಾಧರೇಶ್ವರ ಸ್ವಾಮಿ ದೇವಾಲಯ

ಮೈಸೂರಿನಿಂದ ಹದಿನಾರು ಕಿಲೋಮೀಟರ್ ದೂರದಲ್ಲಿರುವ ಮಂಡ್ಯ ಜಿಲ್ಲೆಗೆ ಸೇರಿದ ಶ್ರೀರಂಗಪಟ್ಟಣವು ಕೇವಲ ಐತಿಹಾಸಿಕ ದೃಷ್ಟಿಯಿಂದ ಮಹತ್ವ ಹೊಂದಿರುವುದೊಂದೇ ಅಲ್ಲ; ಭಾರತದ ಪುಣ್ಯಕ್ಷೇತ್ರಗಳಲ್ಲಿ ಒಂದೆಂದು ಪ್ರಸಿದ್ಧವೂ ಆಗಿದೆ. ಇದಕ್ಕೆ ಕಾರಣ ಇಲ್ಲಿರುವ 'ಆದಿರಂಗ'. ಶ್ರೀರಂಗನಾಥನು ಈ ಕ್ಷೇತ್ರದ ಅಧಿಷ್ಠಾನ ದೇವತೆ. ಆತನ ಹೆಸರಿನಿಂದಲೇ ಈ ಕ್ಷೇತ್ರಕ್ಕೆ 'ಶ್ರೀರಂಗಪಟ್ಟಣ' ಎಂಬ ಹೆಸರು. ಇದಕ್ಕೆ ಪೂರ್ವದಲ್ಲಿ 'ಶ್ರೀರಂಗಪುರಿ' ಎಂಬ ಹೆಸರಿತ್ತು, ಅನಂತರ 'ಲಕ್ಷ್ಮೀಧಾಮಪುರಿ', ಯೆಂದೂ ತರುವಾಯ 'ಶ್ರೀರಂಗಪಟ್ಟಣ'ವೆಂದೂ ಕರೆಯಲ್ಪಟ್ಟಿತು.

ಪುಣ್ಯನದಿಯಾದ ಕಾವೇರಿಯು ಈ ಕ್ಷೇತ್ರದ ವಾಯುವ್ಯ ಮೂಲೆಯಲ್ಲಿ ಪೂರ್ವಾಭಿಮುಖವಾಗಿ ಹರಿದು ಬಂದು ಇಲ್ಲಿ ಎರಡು ಭಾಗವಾಗುತ್ತದೆ. ಒಂದು ದಕ್ಷಿಣಾಭಿಮುಖವಾಗಿ ಹರಿದು ಗೋಸಾಯಿ ಘಾಟ್‌ನಿಂದ ಮೂಲಕಾವೇರಿ ಪೂರ್ವವಾಹಿನಿಯೊಡನೆ ಸಂಗಮವಾಗುತ್ತದೆ. ಪೂರ್ವವಾಹಿನಿಯು 'ದರಿಯಾದೌಲತ್' ಎಂಬ ಟಿಪ್ಪುಸುಲ್ತಾನನ ಅರಮನೆಯಿಂದ ಮುಂದುವರಿದು ಲೋಕಪಾವನಿ ನದಿಯೊಡನೆ ಕರೀಘಟ್ಟಕ್ಷೇತ್ರದ ಸಮೀಪದಲ್ಲಿ ಸಂಗಮವಾಗಿ, ಮುಂದೆ ದಕ್ಷಿಣ ಕಾವೇರಿಯೊಡನೆ ಸೇರುತ್ತವೆ. ಇಷ್ಟೆಲ್ಲ ಆವರಣವನ್ನು ಶ್ರೀರಂಗಪಟ್ಟಣ ದ್ವೀಪವೆನ್ನಬಹುದು.

ಶ್ರೀರಂಗಪಟ್ಟಣವು ಪುರಾತನ ಕಾಲದಿಂದಲೂ ಪುಣ್ಯಕ್ಷೇತ್ರವಾಗಿ ಪರಿಗಣಿಸಲ್ಪಟ್ಟಿದೆ. ಬ್ರಹ್ಮಾಂಡ ಪುರಾಣದಲ್ಲಿ ಹೇಳಿರುವಂತೆ ಈಶ್ವರನು ನಾರದರಿಗೆ ಈ ಕ್ಷೇತ್ರದ ಮಹಿಮೆಯನ್ನು ವಿಸ್ತಾರವಾಗಿ ವಿವರಿಸುತ್ತಾನೆ. ಗೋದಾವರಿ ನದಿಯ ಆಶ್ರಮದಿಂದ ಗೌತಮ ಮಹರ್ಷಿಗಳು ಈ ಕ್ಷೇತ್ರಕ್ಕೆ ಬಂದುದರಿಂದ ಇದಕ್ಕೆ 'ಗೌತಮಕ್ಷೇತ್ರ' ಎಂಬ ಹೆಸರೂ ಇದೆ. ಪ್ರಸಿದ್ಧವಾದ ಮೂರು ರಂಗಗಳಲ್ಲಿ 'ಆದಿರಂಗ'ನ ನಿವಾಸಸ್ಥಾನವಾದುದರಿಂದ ಇದಕ್ಕೆ 'ಆದಿರಂಗಕ್ಷೇತ್ರ' ಅಥವಾ 'ಪಶ್ಚಿಮರಂಗಕ್ಷೇತ್ರ' ಎಂಬ ಹೆಸರುಗಳೂ ಉಂಟು. ಮೂರುಸುತ್ತಿನ ಕೋಟೆ ಕಂದಕಗಳಿಂದ ಕೂಡಿದ್ದ ಈಕ್ಷೇತ್ರದಲ್ಲಿ ಈಗ ಅವುಗಳ ಅವಶೇಷಗಳನ್ನು ಮಾತ್ರ ಕಾಣಬಹುದು.

ಶ್ರೀರಂಗಪಟ್ಟಣವು ದೇವಾಲಯಗಳ ಊರು. ಕೋಟೆಯ ಒಳಗಡೆಯೇ ಸುಮಾರು ಮೂವತ್ತು ಗುಡಿಗಳಿವೆ. ಇವುಗಳ ಪೈಕಿ ಶ್ರೀರಂಗನಾಥ, ಶ್ರೀಲಕ್ಷ್ಮೀನರಸಿಂಹ, ಶ್ರೀಜ್ಯೋತಿರ್ಮಹೇಶ್ವರ ಮತ್ತು ಶ್ರೀಗಂಗಾಧರೇಶ್ವರ ದೇವಾಲಯಗಳು ಬಹು ದೊಡ್ಡವು. ಇಷ್ಟೇ ಅಲ್ಲದೆ ಕೋಟೆಯೊಳಗೇ ಮಾರಮ್ಮ, ಕಾಳಮ್ಮ, ಅಂಕಾಳಮ್ಮ, ಲಕ್ಷ್ಮೀನಾರಾಯಣ, ಸಂತಾನಗೋಪಾಲಕೃಷ್ಣ, ನಗರೇಶ್ವರ, ಜನಾರ್ಧನ, ಶ್ರೀಕೋದಂಡರಾಮಸ್ವಾಮಿ, ಮಹದೇಶ್ವರ, ದೊಡ್ಡ ಹನುಮಂತರಾಯ – ಮುಂತಾದ ದೇವಾಲಯಗಳಿವೆ. ಎಷ್ಟೋ ದೇವಾಲಯಗಳು ಜೀರ್ಣಸ್ಥಿತಿಯಲ್ಲಿದ್ದರೂ ಹೊಸ ಹೊಸದಾಗಿ ದೇವಾಲಯಗಳು ನಿರ್ಮಾಣವಾಗುತ್ತಲೇ ಇರುವುದೊಂದು ಸೋಜಿಗ. ಅಂತಹವುಗಳ ಪೈಕಿ ಅಯ್ಯಪ್ಪಸ್ವಾಮಿಯ ಗುಡಿ, ಸುಬ್ರಹ್ಮಣ್ಯದೇವಾಲಯ, ಶತಕೋಟಿರಾಮಮಂದಿರ – ಇವು ಗಮನಾರ್ಹವಾದವು.



ಗಂಗಾಧರೇಶ್ವರಸ್ವಾಮಿ ಚಿತ್ರ: ಕೆ. ಕೇಶವಮೂರ್ತಿ.

**ಶ್ರೀ ಕೆ. ಕೇಶವಮೂರ್ತಿ**

ಕೋಟೆಯಷ್ಟಕ್ಕೆ ಸೀಮಿತವಾಗದೆ ಇಡೀ ದ್ವೀಪವನ್ನು ಗಣನೆಗೆ ತೆಗೆದುಕೊಂಡರೆ ಸುಮಾರು ಒಂದು ನೂರು ದೇವಾಲಯಗಳಿರಬಹುದು. ಇವಲ್ಲದೇ ಇಲ್ಲಿ ಉತ್ತರಾದಿ ಮಠವಿದೆ; ಅಲ್ಲಿ ರಾಮದೇವರ ಸನ್ನಿಧಿಯಿದೆ. ರಾಘವೇಂದ್ರಸ್ವಾಮಿ ಮಠವಿದೆ; ಇಲ್ಲಿ ಅವರ ಬೃಂದಾವನವಿದೆ, ಯತಿರಾಜ ಮಠವಿದೆ; ಇಲ್ಲಿ ಆಳ್ವಾರರ ಸನ್ನಿಧಿಯಿದೆ. ಜ್ಞಾನನಿಧಿಗಳೆಂಬ ಮಾಧ್ವಸ್ವಾಮಿಗಳ ಸನ್ನಿಧಿ 'ವಾಟರ್‌ಗೇಟ್'ನ ಬಳಿಯಿದೆ; ಇಲ್ಲಿ ಆಂಜನೇಯನ ಗುಡಿಯಿದೆ, ಇನ್ನೂ ಸಣ್ಣಪುಟ್ಟ ಗುಡಿಗಳು ಅವೆಷ್ಟೋ. ಬಹುಶಃ ಇಷ್ಟೊಂದು ದೇವಾಲಯಗಳು ಒಂದೇ ಕಡೆಯಲ್ಲಿ ಇರುವ ಊರು ಇಡೀ ಕರ್ನಾಟಕದಲ್ಲಿ ಯಾವುದೂ ಇರಲಾರದು. ಆದ್ದರಿಂದಲೇ ಇದು ದೇವಾಲಯಗಳ ಪಟ್ಟಣ.

ಇಂತಹ ಪವಿತ್ರಕ್ಷೇತ್ರದಲ್ಲಿ ಕಾವೇರೀನದಿಯ ತೀರದಲ್ಲಿ ಭಕ್ತರು ಸಕಲ ಇಷ್ಟಾರ್ಥಗಳನ್ನು ನೆರವೇರಿಸಲೋಸುಗ ಶ್ರೀ ಗಂಗಾಧರೇಶ್ವರನು ಚತುರ್ಯುಗ ಮೂರ್ತಿಯಾಗಿ ನೆಲೆಸಿದ್ದಾನೆ. ಈತನಿಗೆ 'ಜಟಾಗಂಗಾಧರ' ನೆಂದೂ ಹೆಸರುಂಟು. ಲಿಂಗದ ಮೇಲೆ ಜಟೆಯ ಕುರುಹುಗಳು ಕಾಣುತ್ತವೆ. ಇದು ಉದ್ಭವಮೂರ್ತಿ.

ಇಕ್ಷ್ವಾಕು ವಂಶದ ಅರಸು ದಿಲೀಪನ ಮಗನಾದ ಭಗೀರಥನು, ಕಪಿಲ ಮಹರ್ಷಿಗಳ ಶಾಪಕ್ಕೊಳಗಾಗಿ ಭಸ್ಮವಾಗಿದ್ದ ತನ್ನ ಅರವತ್ತು ಸಾವಿರ ಮಂದಿ ಮುತ್ತಾತಂದಿರಿಗೆ ಸದ್ಗತಿಯನ್ನುಂಟುಮಾಡುವುದಕ್ಕಾಗಿ ದೇವಗಂಗೆಯನ್ನು ಭೂಲೋಕಕ್ಕೆ ಬರಮಾಡಿಕೊಳ್ಳಬೇಕಾಯಿತು. ದೇವಲೋಕದಿಂದ ಕೆಳಕ್ಕೆ ಧುಮುಕುವಾಗ ಆಕೆಯ ರಭಸವನ್ನು ತಡೆಯ ಬಲ್ಲವರಾರು? ಅದಕ್ಕಾಗಿ ಭಗೀರಥನು ಪರಮೇಶ್ವರನನ್ನು ಕುರಿತು ತಪಸ್ಸುಮಾಡಿ ಆತನನ್ನು ಮೆಚ್ಚಿಸಿದನು. ಶಿವನು ಗಂಗೆಯ ರಭಸವನ್ನು ಧರಿಸಲು ಅನುವಾದನು. ಆದರೆ ಗಂಗೆಯು ಈಶ್ವರನನ್ನೇ ಕೊಚ್ಚಿಬಿಡುತ್ತೇನೆಂಬ ಅಹಂಭಾವದಿಂದ ಧುಮುಕಲುದ್ಯುಕ್ತಳಾದಳು. ಇದನ್ನು ಕಂಡ ತ್ರಿನೇತ್ರನು ಗಂಗೆಯನ್ನು ತನ್ನ ಜಟೆಯಲ್ಲಿಯೇ ತಡೆದು 'ಗಂಗಾಧರೇಶ್ವರ' ಎಂಬ ಬಿರುದಿಗೆ ಪಾತ್ರನಾದನು.

ಶ್ರೀರಂಗಪಟ್ಟಣದಲ್ಲಿರುವ ನಾಲ್ಕು ದೊಡ್ಡ ದೇವಾಲಯಗಳಲ್ಲಿ ಶ್ರೀ ಗಂಗಾಧರೇಶ್ವರ ದೇವಾಲಯವೂ ಒಂದು. ಇದನ್ನು ಎಂದು ಯಾರು ಕಟ್ಟಿಸಿದರು ಎಂಬುದಕ್ಕೆ 'ಇದಮಿತ್ಥಂ' ಎಂದು ಹೇಳಲು ಸಾಧ್ಯವಿಲ್ಲ. ಮೊದಲು ಗರ್ಭಗುಡಿಯ ಅಂಕಣ ಮಾತ್ರವಿದ್ದಿತಂತೆ ಅನಂತರ 'ಸುಕನಾಸಿ'ಯ ನಿರ್ಮಾಣ. 'ಸುಕನಾಸಿ' ಎಂದರೆ ಗರ್ಭಗುಡಿಯ ಮುಂದಿನ ಅಂಕಣ. ಆ ಮೇಲೆ 'ನವರಂಗ'. (ಒಂಬತ್ತು ಅಂಕಣವಿರುವ ಮಂಟಪವನ್ನು 'ನವರಂಗ' ಎನ್ನುತ್ತಾರೆ) ಅನಂತರ ದೇವಾಲಯದ ಪ್ರಾಕಾರದ ನಿರ್ಮಾಣವಾಯಿತಂತೆ. ಬಹುಶಃ ವಿಜಯನಗರದರಸರ ಆಳ್ವಿಕೆಯಲ್ಲಿ ದೇವಾಲಯವು ಕಟ್ಟಲ್ಪಟ್ಟಿರಬೇಕು.

ದೇವಾಲಯಕ್ಕೆ ಐದು ಅಂತಸ್ತುಗಳ ಗೋಪುರವಿದ್ದಿತಂತೆ. ಸಾಮಾನ್ಯವಾಗಿ ಗೋಪುರವಿಲ್ಲದ ದೊಡ್ಡ ದೇವಾಲಯ ಭಾರತದಲ್ಲಿ ಯಾವುದೂ ಇಲ್ಲ.

ದೇವಾಲಯಕ್ಕೆ ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಮಹಾದ್ವಾರಗಳಿವೆ. ಆದರೆ ಕಾರಣಾಂತರದಿಂದ ಪೂರ್ವದ್ವಾರ ಬಹುದಿನಗಳಿಂದ ಮುಚ್ಚಲ್ಪಟ್ಟಿದೆ. ದಕ್ಷಿಣ ದಿಕ್ಕಿನ ದ್ವಾರದಿಂದಲೇ ಭಕ್ತಾದಿಗಳ ಪ್ರವೇಶ ಮತ್ತು ನಿರ್ಗಮನ. ದೇವಾಲಯವನ್ನು ಪ್ರವೇಶಿಸುವುದಕ್ಕೆ ಮೊದಲೇ ಎಡಭಾಗದಲ್ಲಿ ಮಹಾಗಣಪತಿಯ ಪುಟ್ಟ ಗುಡಿಯಿದೆ. ಇದು ಮುಜರಾಯಿ ಇಲಾಖೆಗೆ ಸೇರಿಲ್ಲವಾದರೂ ದೇವಾಲಯದ ಆಡಳಿತಕ್ಕೆ ಒಳಪಟ್ಟಿದೆ. ಗುಡಿಯ ಒಳಗೆ ಸಕಲ ವಿಘ್ನಗಳನ್ನೂ ಪರಿಹರಿಸುವ ವಿಘ್ನರಾಜನು ಮಂಡಿಸಿದ್ದಾನೆ.

ಮಹಾದ್ವಾರವನ್ನು ಪ್ರವೇಶಿಸಿದೊಡನೆಯೇ 'ಕಂಬದ ಗಣಪತಿ' ಮತ್ತು 'ಬಸವ'ನ ಪುಟ್ಟ ವಿಗ್ರಹಗಳು ಒಂದೊಂದು ಪಾರ್ಶ್ವದಲ್ಲೂ ಕೆತ್ತಲ್ಪಟ್ಟಿವೆ. ಅಲ್ಲಿಂದ ಮುಂದಕ್ಕೆ ಹೋದರೆ ದೇವಾಲಯದ ಒಳ ಪ್ರಾಕಾರ ಎಡಗಡೆಗೆ ದೊಡ್ಡದೊಂದು ಮಂಟಪವಿದೆ. ಅದನ್ನು 'ದಕ್ಷಿಣಾಮೂರ್ತಿ ಮಂಟಪ' ಎನ್ನುತ್ತಾರೆ. ಈ ಮಂಟಪವನ್ನು ಗಂಗರಸರು ಕಟ್ಟಿಸಿದರೆಂದು ಪ್ರತೀತಿ. ಜ್ಯೋತಿರ್ಮಹೇಶ್ವರ ದೇವಾಲಯವನ್ನು ಅಗೆಯುವಾಗ ಅಲ್ಲಿ ಶಿಲೆಯ ದಕ್ಷಿಣಾಮೂರ್ತಿ ವಿಗ್ರಹವು ಸಿಕ್ಕಿತು. ಅದನ್ನು ಈ ಮಂಟಪದಲ್ಲಿ ಪ್ರತಿಷ್ಠಾಪನೆ ಮಾಡಿದ್ದಾರೆ. ದಳವಾಯಿ ದೇವರಾಜಯ್ಯನ ಮೊಮ್ಮಗ ಕಳಲೆ ನಂಜರಾಜಯ್ಯನದೆಂದು ಹೇಳಲಾದ ಪಂಚಲೋಹದ ದಕ್ಷಿಣಾಮೂರ್ತಿಯ ಭಾರಿ ವಿಗ್ರಹವೊಂದು ಈ ಗುಡಿಯಲ್ಲಿದೆ. ಹಿಂದೆ ಶಂಕರ ಜಯಂತಿಯ ಸಂದರ್ಭದಲ್ಲಿ ಇದರ ಉತ್ಸವವಾಗುತ್ತಿದ್ದಿತು.

ದಕ್ಷಿಣಾಮೂರ್ತಿ ಮಂಟಪಕ್ಕೆ ಸೇರಿದಂತೆಯೇ ಈಶ್ವರನ ಪಂಚಮುಖಗಳ ಹೆಸರಿನಲ್ಲಿ ಒಂದೊಂದು ಶಿವಲಿಂಗವಿದೆ. ಒಂದೊಂದು ಲಿಂಗವೂ ಒಂದೊಂದು ಪುಟ್ಟಗುಡಿಗಳಲ್ಲಿ ಪ್ರತಿಷ್ಠಿತವಾಗಿವೆ. ಅವುಗಳೇ ಸದ್ಯೋಜಾತೇಶ್ವರ, ವಾಮದೇವೇಶ್ವರ, ಅಘೋರೇಶ್ವರ, ತತ್ಪುರುಷೇಶ್ವರ, ಮತ್ತು ಈಶಾನೇಶ್ವರ. ಅದೇ ಸಾಲಿನಲ್ಲಿರುವ ಮತ್ತೊಂದು ಗುಡಿ ವೀರಭದ್ರಸ್ವಾಮಿ–ಚೂಡಾನಾಥೇಶ್ವರಸ್ವಾಮಿ ; ಒಂದು ವಿಗ್ರಹ, ಮತ್ತೊಂದು ಲಿಂಗ. ಪ್ರತಿ ಲಿಂಗದ ಮುಂದೆಯೂ ಒಂದೊಂದು ಬಸವವಿದೆ.

ಇದಕ್ಕೆ ಪಕ್ಕದ ಸಾಲಿನಲ್ಲಿರುವ ಗುಡಿಗಳಲ್ಲಿ ಗೌತಮೇಶ್ವರನು ಅತ್ಯಂತ ದೊಡ್ಡ ಲಿಂಗ. ಇದರ ಪಕ್ಕದ್ದೇ ಹಿಂದೆ ಹೇಳಿದ ದಕ್ಷಿಣಾಮೂರ್ತಿ ಗುಡಿ. ಅದರ ಪಕ್ಕದಲ್ಲಿ ಶ್ರೀ ಅರುಣಾಚಲೇಶ್ವರ, ಶ್ರೀ ಅವಿಮುಕ್ತೇಶ್ವರ, ಶ್ರೀ ಅರ್ಕೇಶ್ವರ, ಶ್ರೀ ಅಗಸ್ತ್ಯೇಶ್ವರ, ಶ್ರೀ ಆನಂದೇಶ್ವರ, ಶ್ರೀ ಕಪಿಲೇಶ್ವರ ಮತ್ತು ಶ್ರೀ ಕೌಂಡಿನ್ಯೇಶ್ವರ ಗುಡಿಗಳಿವೆ. ಒಂದು ಗುಡಿಯಿಂದ ಇನ್ನೊಂದು ಗುಡಿಗೆ ಹೋಗಲು ಮಾರ್ಗವಿದೆ.

ಪಂಚಮುಖ ಲಿಂಗಗಳ ಎದುರು ಸಾಲಿನಲ್ಲಿರುವ ಗುಡಿಗಳಲ್ಲಿ ಕ್ರಮವಾಗಿ ಪಾತಾಳೇಶ್ವರ, ಮಣಿಕರ್ಣಿಕೇಶ್ವರ, ಸಂವರ್ತಕೇಶ್ವರ, ವಾಮಕೇಶ್ವರ, ಮತ್ತು ಯೋಗ ದಕ್ಷಿಣಾಮೂರ್ತಿ ಗುಡಿಗಳಿವೆ. ಅಲ್ಲದೆ ಇಲ್ಲಿ ಆಳ್ವಾರರುಗಳ ವಿಗ್ರಹಗಳಿವೆ.

ಹಾಗೆಯೇ ಮುಂದಕ್ಕೆ ಹೋದರೆ ಪ್ರಸನ್ನ ಪಾರ್ವತಿ ಅಮ್ಮನವರ ಗುಡಿಯಿದೆ. ಭಕ್ತರ ಅಭೀಷ್ಟಗಳನ್ನು ನೆರವೇರಿಸಲೋಸುಗ ದೇವಿಯು ಅಭಯ ಮುದ್ರೆಯಿಂದ ಪ್ರಸನ್ನಳಾಗಿ ನಿಂತಿದ್ದಾಳೆ. ಎಡಪಕ್ಕದಲ್ಲಿ ಚಂಡಿಕೇಶ್ವರನ ಗುಡಿಯಿದೆ. ಅದಕ್ಕೆ ಎದುರು ಕಂಬದಲ್ಲಿ ಕೆತ್ತಿರುವ ಗಣಪತಿಯಿದೆ.

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

ಇದಕ್ಕೆ 'ಕಂಬದ ಗಣಪತಿ' ಎಂದೇ ಹೆಸರಿದೆ. ಅಮ್ಮನವರ ಗುಡಿಯ ಬಲಕ್ಕೆ 'ವಿದ್ಯಾಗಣಪತಿ' ಇದ್ದಾನೆ.

ಪ್ರದಕ್ಷಿಣೆಯನ್ನು ಮುಂದುವರಿಸಿಕೊಂಡು ಬಂದರೆ ಕಟ್ಟೆಕಟ್ಟಿರುವ ಬಿಲ್ವವೃಕ್ಷವಿದೆ. ಇದರ ಸುತ್ತಾ ನಾಗಕಲ್ಲುಗಳಿವೆ. ಅದನ್ನು ಸುತ್ತಿ ಬಂದರೆ ಶ್ರೀ ಗಾಯತ್ರೀಮಾತೆಯ ಗುಡಿಯಿದೆ. ಶ್ರೀ ಭವಾನಿಸ್ವಾಮಿಗಳು ಇದನ್ನು ಪ್ರತಿಷ್ಠಾಪಿಸಿರುತ್ತಾರೆ. ಈ ಗುಡಿಯ ಒಳಗೆ ಪಂಚಮುಖಗಳನ್ನು ಹೊಂದಿ ನವಿಲಿನ ಮೇಲೆ ಕುಳಿತಿರುವ ವಿಗ್ರಹವೊಂದಿದೆ. ಅದನ್ನು 'ಹಂಸಗಾಯತ್ರಿ' ಎನ್ನುತ್ತಾರೆ.

ಅದರ ದರ್ಶನಮಾಡಿಕೊಂಡು ಮುಂದೆ ಬಂದರೆ ಲೋಹದ ಗರುಡಗಂಬವೊಂದಿದೆ. ಇದನ್ನು ಧ್ವಜಾರೋಹಣ ಸಂದರ್ಭದಲ್ಲಿ ಉಪಯೋಗಿಸುತ್ತಾರೆ. ಬಲಿಹರಣಕ್ಕೆ ಬಲಿಕಲ್ಲು ಇದರ ಮುಂಭಾಗದಲ್ಲಿದೆ. ಗರುಡಗಂಬದ ಮುಂದೆ ಪುಟ್ಟ ಬಸವ ಇದ್ದಾನೆ. ಇಲ್ಲಿ 'ಕ್ಷೇತ್ರಪಾಲ'ನಿಲ್ಲ. ಶ್ರೀ ಗಂಗಾಧರನೇ ಇಲ್ಲಿಯ ಕ್ಷೇತ್ರಪಾಲ.

ಗರುಡಗಂಬವನ್ನು ಬಳಸಿ ಮುಂದೆ ಬಂದರೆ ಶ್ರೀ ಎಂ. ಎಚ್. ತಮ್ಮಯ್ಯನವರ ಸೇವಾರ್ಥದಿಂದ ನಿರ್ಮಿತವಾದ ನವಗ್ರಹ ಗುಡಿಯಿದೆ. ಒಳಗೆ ಸುತ್ತ ಪ್ರದಕ್ಷಿಣೆ ಮಾಡಲು ಅನುಕೂಲವಾಗಿದೆ. ಸ್ವಾಮಿ ಸನ್ನಿಧಿಯ ಪ್ರವೇಶದ್ವಾರದ ಎಡಭಾಗದಲ್ಲಿ ಶ್ರೀ ಸುಬ್ರಹ್ಮಣ್ಯಸ್ವಾಮಿಯವರ ಗುಡಿಯಿದೆ.

ಇಷ್ಟು ದೇವತೆಗಳನ್ನು ದರ್ಶನಮಾಡಿಕೊಂಡು ಹೋದರೆ ಪೂರ್ವದಿಕ್ಕಿನ ದ್ವಾರದಿಂದ ಶ್ರೀ ಗಂಗಾಧರೇಶ್ವರನ ಸನ್ನಿಧಿಯನ್ನು ತಲುಪುತ್ತೇವೆ. ಸುಕನಾಸಿಯ ಪ್ರವೇಶದ್ವಾರದಲ್ಲಿ ನಂದಿ ಮತ್ತು ಭೃಂಗಿಯರು ದ್ವಾರಪಾಲಕರಾಗಿ ನಿಂತಿದ್ದಾರೆ. ಒಳಗೆ ಗರ್ಭಗುಡಿಯಲ್ಲಿ ಶ್ರೀ ಗಂಗಾಧರನು ಲಿಂಗರೂಪದಲ್ಲಿ ನೆಲಸಿದ್ದಾನೆ. ಸ್ವಾಮಿಯನ್ನು ನೋಡುತ್ತಾ ನಿಂತರೆ ಹೊರಗೆ ಹೋಗಲು ಮನಸ್ಸಾಗುವುದಿಲ್ಲ.

ಸ್ವಾಮಿಯವರ ಎಡಗಡೆಗೆ ನವರಂಗದಲ್ಲಿ ಏಕಶಿಲೆಯಲ್ಲಿ ಕೆತ್ತಿರುವ ಸಪ್ತ ಮಾತೃಕೆಯರಿದ್ದಾರೆ. ಅವರುಗಳೇ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಿ. ಪಕ್ಕದಲ್ಲಿ ಶ್ರೀ ವರದರಾಜಸ್ವಾಮಿಯ ಸುಂದರಮೂರ್ತಿ ಇದೆ. ಅದರ ಪಕ್ಕದಲ್ಲಿ ಮಹಾಬಲೇಶ್ವರನ ಪುಟ್ಟಲಿಂಗವೂ, ಮಹಿಷಾಸುರ ಮರ್ದಿನಿಯ ವಿಗ್ರಹವೂ ಇದೆ. ಸ್ವಾಮಿಯ ಎಡಭಾಗಕ್ಕೆ ಶ್ರೀ ಮಹಾಗಣಪತಿ ಇದ್ದಾನೆ.

ಸ್ವಾಮಿಸನ್ನಿಧಿಯ ಬಲಗಡೆಗೆ ನವರಂಗದಲ್ಲಿ ಉತ್ಸವಮೂರ್ತಿಯ ಗುಡಿಯಿದೆ. ಇಲ್ಲಿ ಸ್ವಾಮಿಯ ಪಂಚಲೋಹದ ಉತ್ಸವಮೂರ್ತಿಯಿದೆ. ಗಂಗೆ ಮತ್ತು ಪಾರ್ವತಿಯರು ಸ್ವಾಮಿಯ ಉಭಯ ಪಾರ್ಶ್ವಗಳಲ್ಲಿರುವುದು ಉತ್ಸವದ ಒಂದು ವಿಶೇಷ. ಈ ಮೂರ್ತಿಗಳೇ ಅಲ್ಲದೇ ಚಂಡಿಕೇಶ್ವರ ಸಂಹಾರ ಮೂರ್ತಿ. (ಚಿಕ್ಕದು ಮತ್ತು ದೊಡ್ಡದು) ಗಣಪತಿ ಇತ್ಯಾದಿ ಹಲವಾರು ಪಂಚಲೋಹದ ಮೂರ್ತಿಗಳಿವೆ.

ಉತ್ಸವಮೂರ್ತಿ ಗುಡಿಯ ಪಕ್ಕದಲ್ಲಿ ಕಾಲಭೈರವ ವಿಗ್ರಹವಿದೆ. ಶಿವನ ಎರಡೂ ಪಾದಗಳು ಇಲ್ಲಿರುವುದೊಂದು ವಿಶೇಷ. ಇದನ್ನು 'ರುದ್ರಪಾದ' ಎನ್ನುತ್ತಾರೆ. ಅನಂತರ ನಟರಾಜ, ಕುಮಾರಸ್ವಾಮಿ, ವೀರಭದ್ರಸ್ವಾಮಿ ವಿಗ್ರಹಗಳಿವೆ, ಮೂಲವರ ಎದುರಿಗೆ ಆತನ ನೇತ್ರಗಳೋ ಎಂಬಂತೆ ಪ್ರವೇಶದ್ವಾರದ ಉಭಯ ಪಾರ್ಶ್ವಗಳಲ್ಲಿ ಸೂರ್ಯ ಮತ್ತು ಚಂದ್ರರಿದ್ದಾರೆ. ಸ್ವಾಮಿಯ ದರ್ಶನವಾದ ನಂತರ ದಕ್ಷಿಣದಿಕ್ಕಿನ ಬಾಗಿಲಿನಿಂದ ನಿರ್ಗಮಿಸಬಹುದು.

ಈ ದೇವಾಲಯದಲ್ಲಿ ನಿತ್ಯವೂ ಪ್ರಾತಃಕಾಲ ೭-೩೦ ರಿಂದ ೧೧-೩೦ ವರೆಗೆ ಸಾಯಂಕಾಲ ೫-೩೦ ರಿಂದ ೮-೩೦ ವರೆಗೆ ಪೂಜಾಕಾಲವಾಗಿರುತ್ತದೆ.

ದೇವಾಲಯದ ಆಡಳಿತವು ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆಗೆ ಸೇರಿದೆ. ದೇವಾಲಯಕ್ಕೆ ಸ್ಥಳೀಯ ಮೇಲಧಿಕಾರಿಗಳು ತಹಶೀಲ್ದಾರರು, ಅನಂತರ ಒಬ್ಬ ಪಾರುಪತ್ತೇಗಾರರು, ಅರ್ಚಕರು, ಪರಿಚಾರಕರು, ಕಾವಲುಗಾರರು; ಎಲ್ಲರೂ ಒಬ್ಬೊಬ್ಬರೇ ಇದ್ದಾರೆ. ಅಲ್ಲದೆ ದೇವಾಲಯದ ಉಸ್ತುವಾರಿ ನೋಡಿಕೊಳ್ಳಲು ಒಂಬತ್ತು ಸದಸ್ಯರ ಒಂದು ಧರ್ಮದರ್ಶಿ ಸಮಿತಿಯಿದೆ.

## ಉತ್ಸವಗಳು

೧. ವೈಶಾಖ ಶುದ್ಧ ಪಂಚಮಿಯಿಂದ ಮೊದಲ್ಗೊಂಡು ಶಂಕರ ಜಯಂತಿಯ ಅಂಗವಾಗಿ ಏಳು ದಿವಸ ರುದ್ರಾಭಿಷೇಕ. ಕೊನೆಯ ದಿನ ಶತರುದ್ರೀಯ. ಸಾಯಂಕಾಲ ಶ್ರೀ ಗಂಗಾಧರೇಶ್ವರ ಮತ್ತು ಶ್ರೀ ಶಂಕರಾಚಾರ್ಯರ ಪುರ ಮೆರವಣಿಗೆ ವೇದಘೋಷದೊಡನೆ.

೨. ಆಷಾಢ ಶುದ್ಧ ತೃತೀಯೆಯಂದು ಮಾರ್ಕಂಡೇಯೋತ್ಸವ.

೩. ಆಶ್ವಯುಜ ಶುದ್ಧ ಪ್ರತಿಪತ್‌ನಿಂದ ವಿಜಯದಶಮಿ ಪರ್ಯಂತ ದಸರಾ ಉತ್ಸವ. ಪ್ರತಿದಿನ ಶ್ರೀ ಸ್ವಾಮಿಯವರ ದರ್ಬಾರು. ಅಧಿಕಾರ ವರ್ಗದವರಿಂದ ನಜರು—ಮುಜರೆಗಳ ಸಮರ್ಪಣೆ. ಕೊನೆಯ ದಿನ ವಿಜಯದಶಮಿ ಉತ್ಸವ; ಊರ ಹೊರಗೆ ಹೋಗಿ ಬನ್ನಿವೃಕ್ಷಕ್ಕೆ ಪೂಜೆಸಲ್ಲಿಸಿ ಬರುವುದು.

೪. ಕಾರ್ತೀಕ ಶುದ್ಧ ಪಾಡ್ಯಮಿಯಲ್ಲಿ ಕೈಲಾಸೋತ್ಸವ.

೫. ಕಾರ್ತಿಕ ಮಾಸದ ಪ್ರಥಮ ಸೋಮವಾರ : ಅಶ್ವವಾಹನೋತ್ಸವ.

೬. ಕಾರ್ತಿಕ ಮಾಸದ ದ್ವಿತೀಯ ಸೋಮವಾರ : ನಂದಿವಾಹನೋತ್ಸವ.

೭. ಕಾರ್ತಿಕ ಮಾಸದ ತೃತೀಯ ಸೋಮವಾರ ಹಂಸವಾಹನೋತ್ಸವ.

೮. ಕಾರ್ತಿಕ ಮಾಸದ ಚತುರ್ಥ ಸೋಮ ಪುಷ್ಪ ಲಿಂಗೋತ್ಸವ.

೯. ಕಾರ್ತಿಕ ಶುದ್ಧ ದ್ವಾದಶಿಯಂದು (ಉತ್ಥಾನ ದ್ವಾದಶಿ) ಶ್ರೀ ರಂಗನಾಥನ ಬೃಂದಾವನೋತ್ಸವದ ಅಂಗವಾಗಿ ಶ್ರೀ ಸ್ವಾಮಿಗೆ ಅಡ್ಡ ಪಲ್ಲಕ್ಕಿ ಉತ್ಸವ.

೧೦. ಮಾರ್ಗಶಿರ ಶುದ್ಧ ಷಷ್ಠಿ : ಶೇಷವಾಹನೋತ್ಸವ.

೧೧. ಮಾರ್ಗಶಿರ ಶುದ್ಧ ಪೌರ್ಣಮೆ: ಕೃತ್ತಿಕೋತ್ಸವ.

೧೨. ಪುಷ್ಯಶುದ್ಧ ಚತುರ್ಥಿ : ಅಂಧಕಾಸುರ ಸಂಹಾರೋತ್ಸವ.

೧೩. ಪುಷ್ಯ ಶುದ್ಧ ಪೌರ್ಣಮೆ: ಆರಿದ್ರೋತ್ಸವ.

ಶ್ರೀ ಸ್ವಾಮಿಯವರಿಗೆ ಎರಡು ರಥೋತ್ಸವಗಳುಂಟು. ಶಿವರಾತ್ರಿಯಂದು ಚಿಕ್ಕ ರಥೋತ್ಸವವೂ, ಚೈತ್ರ ಶುದ್ಧ ಪೌರ್ಣಮೆಯಂದು ದೊಡ್ಡ ರಥೋತ್ಸವವೂ ನಡೆಯುತ್ತವೆ. ಚಿಕ್ಕ ರಥೋತ್ಸವ ಹಾಗೂ ದೊಡ್ಡ ರಥೋತ್ಸವ ಕೈಂಕರ್ಯಗಳು ಕ್ರಮವಾಗಿ ಐದು ಮತ್ತು ಒಂಬತ್ತು ದಿನಗಳು ಜರುಗುತ್ತವೆ. ರಥವು ಶಿಥಿಲವಾಗಿರುವುದರಿಂದ ಚಿಕ್ಕ ಕೈಗಾಡಿಯೊಂದರಲ್ಲಿ ರಥೋತ್ಸವವು ಜರುಗುತ್ತದೆ. ಶಿಥಿಲವಾದ ರಥವು ದೇವಾಲಯದ ಪ್ರವೇಶದ್ವಾರದಲ್ಲಿ ಭಕ್ತಾದಿಗಳ ಗಮನ ಸೆಳೆಯುತ್ತಾ ದುರಸ್ತಿಗಾಗಿ ಎದುರು ನೋಡುತ್ತಿದೆ. ಅಂಕುರಾರ್ಪಣದಿಂದ ಪ್ರಾರಂಭವಾಗುವ ರಥೋತ್ಸವವು ಶಯನೋತ್ಸವದೊಡನೆ ಮುಕ್ತಾಯವಾಗುತ್ತದೆ.

# ಶ್ರೀ ಭಗವದ್ಗೀತೆ

ಲೋಕೋದ್ಧಾರಕೆ ಗೀತಾಮೃತವನು
ತಾನೇ ಕರೆದನು ಗೋಪಾಲ ।
ಶೋಕವ ನೀಗುವ ಉಪನಿಷದರ್ಥವ
ಉಪದೇಶಿಸಿದಾ ಶ್ರೀಲೋಲ ॥೧॥

ಪಾರ್ಥನ ಶಂಕೆ, ವಿಷಾದವನೆಲ್ಲ
ದೂರವ ಮಾಡಿದ ಮುರವೈರಿ ।
ಪಾರ್ಥಿವಪೌರುಷ, ಆತ್ಮಾನಾತ್ಮದ
ಮಹತ್ವ ತಿಳಿಸಿದನಸುರಾರಿ ॥೨॥

ಆತ್ಮನು ನಿತ್ಯನು, ತೃಪ್ತನು, ಶಾಶ್ವತ
ಆತ್ಮನನರಿವುದೆ ಸಾರ್ಥಕವು ।
ಆತ್ಮವಿದ್ಯೆಯಿದು ಬ್ರಹ್ಮವಿದ್ಯೆಯಿದು
ಸಂಯಮದಿಂದಲಿ ಸಾಧಿಪುದು ॥೩॥

ಇಂದ್ರಿಯಪಾಶಕೆ ಸಿಲುಕುವ ಮನುಜರು
ಕೆಡುವರು ಲೋಕದಿ ಸಹಜದಲಿ ।
ಇಂದ್ರಿಯ ಗೆಲುವನ ಬುದ್ಧಿಯು ಅಳುಕದು
ಸಾಧನೆ ನಡೆಯಲಿ ಯೋಗದಲಿ ॥೪॥

ಫಲವನು ಬಯಸದೆ ಕರ್ಮವ ಮಾಳ್ಪುದು
ಯೋಗವಿದೆನ್ನುವ ರೀತಿಯಲಿ
ಫಲವನು ಬಯಸುತ ನಾನು ಮಾಡಿದೆನು
ಎಂಬುದಶಾಂತಿಗೆ ಕಾರಣವು ॥೫॥

ಮಾಡುವ ಕೆಲಸವು ಆವುದೆ ಆದರು
ದೇವನ ಪ್ರೀತಿಗೆ ಮಾಡುವುದು
ಮಾಡುವ ಕೆಲಸಕೆ ಕಾಮನೆಯಿಲ್ಲದೆ
ತ್ಯಾಗವ ಯೋಗವ ಸಾಧಿಪುದು ॥೬॥

ಸ್ವಧರ್ಮದಿಂದಲಿ ನಡೆಯುವ ಸಾಧಕ
ಸಿದ್ಧಿಯ ಪಡೆವನು ಬೇಗದಲಿ
ನೆಚ್ಚದೆ ಅನ್ಯರ ಧರ್ಮ, ದೈವವನು
ಅಕಾಮ ಕರ್ಮ ನಡೆಸುವುದು ॥೭॥

ಕಾಮವು ಎಲ್ಲಾ ವಿಕೃತಿಗೆ ನೆಲೆವನೆ
ಕಾಮವ ಗೆಲ್ವುದೆ ಪರಮ ಗುರಿ
ಕಾಮ, ಕ್ರೋಧ, ಲೋಭಾದಿಗಳೆಲ್ಲ
ನರಕಕೆ ದ್ವಾರವು ಆಗಿಹವು ॥೮॥

ಭಕ್ತಿಯೆ ಶಕ್ತಿಯು, ಭಕ್ತಿಯೆ ಮುಕ್ತಿಯು
ಭಕ್ತರವತ್ಸಲ ಶ್ರೀಹರಿಯು
ಭಕ್ತಿಪ್ರಿಯನನು ಭಜಿಸಿರಿ ಸಂತತ
ನಿಶ್ಚಲ ಭಕ್ತಿಯ ಯೋಗದಲಿ ॥೯॥

ಆಸುರಿಸಂಪದ ತೊರೆಯುತಲೆಲ್ಲರು
ದೈವೀಸಂಪದ ಪಡೆಯುವುದು
ನಿರ್ಮಲ ಚಿತ್ತದಿ ಸಂಗವಿವರ್ಜಿತ
ರಾಗುತ ಕಾಯಕ ನಡೆಸುವುದು ॥೧೦॥

ಆಸೆಯು ಇಲ್ಲದ ಆತ್ಮಸಂಯಮಿಗೆ
ಲೌಕಿಕಬಂಧನ ಸೋಂಕದಿದೆ
ಲೋಕೋದ್ಧಾರಕೆ ಕಾಯಕ ಮಾಡುವ
ಅಂತರ್ಮುಖಿಯೇ ನಿತ್ಯಸುಖಿ ॥೧೧॥

ದೈವವ ಮರೆವುದೆ ಕರ್ಮದ ಬಂಧನ
ಅರಿವುದು ದೈವೀಗುಣನಿಧಿಯ
ದೈವೀಗುಣಗಳ ಪಡೆಯುತ ಸಾಧಕ
ದೈವೀಜೀವನ ನಡೆಸುವುದು ॥೧೨॥

ಇಂದ್ರಿಯನಿಗ್ರಹ ಸಾಧನೆ ನಡೆಸಲು
ಲೌಕಿಕ ಚಿಂತನೆ ಬರದಿರಲಿ
ಬಂಧನವೆಂಬುದು ಜಟಿಲವು ಲೋಕದಿ
ಯೋಗೇಶ್ವರನನು ಕಾಣುವುದು ॥೧೩॥

ಅನನ್ಯಭಕ್ತಿಯು ಗುರುತರಸಾಧನೆ
ಶರೀರಭಾವವ ಹೊರದೂಡಿ
ಸರ್ವಸಮರ್ಪಣೆ ಭಾವವು ಸೇರಲು
ಸರ್ವೇಶ್ವರನನು ಕಾಣುವುದು ॥೧೪॥

ಸಮಸ್ತ ವಸ್ತುಗಳಲ್ಲಿಯು ದೇವನು
ಅಂತರ್ಗತನು ಅವಿನಾಶಿ
ಸ್ಥಾವರ ಜಂಗಮ ವ್ಯಾಪಿಸಿ ಮೆರೆವನು
ವಿಭೂತಿ ತತ್ತ್ವದ ಮಹಿಮೆಯಲಿ ॥೧೫॥

ಧ್ಯಾನ ವಿಭೂತಿ ಯೋಗಾದಿಗಳನು
ಸಾಧಿಪುದೆಲ್ಲರು ಶ್ರದ್ಧೆಯಲಿ
ಸಾತ್ತ್ವಿಕತಪವನು ನಡೆಸುತಲೆಲ್ಲರು
ಸ್ಥಿತಪ್ರಜ್ಞತ್ವವ ತಿಳಿಯುವುದು ॥೧೬॥

ಭವವನು ದಾಟುತ ಗುರುತರ ಪದವಿಯ
ಪಡೆಯಲು ಗೀತಾಮೃತಪಾನ
ಶಾಂತಿಗೆ ಸೌಖ್ಯಕೆ ನೆಮ್ಮದಿ ಬಾಳ್ವಿಗೆ
ಗೀತೆಯೆ ಜೀವದ ಸವಿಗಾನ ॥೧೭॥

ಪಾರ್ಥನು ಇದ್ದೆಡೆ ಪಾರ್ಥಸಾರಥಿಯು
ಪಾರ್ಥಿವಪೌರುಷ ಮೆರೆಯುವುದು
ಸಾರ್ಥಕಪಡೆಯಲು ಗೀತೆಯು ತೋರಿದ
ಬೆಳಕಿನ ಬಾಳುವೆ ನಡೆಸುವುದು ॥೧೮॥



**ಪ್ರೊ॥ ಡಿ. ಟಿ. ರಂಗಸ್ವಾಮಿ**

# ಸ್ವಾಮಿ ಅಯ್ಯಪ್ಪ

ನಮ್ಮ ಭಾರತದೇಶವು ಹಲವು ಪುಣ್ಯ ಕ್ಷೇತ್ರಗಳ, ದಾಸರ ಸಂತರ ನೆಲೆವೀಡು. 'ತಿರುಪತಿ ತಿಮ್ಮಪ್ಪ, ಧರ್ಮಸ್ಥಳ ಅಣ್ಣಪ್ಪ, ಶಬರಿಮಲೆ ಅಯ್ಯಪ್ಪ' ಎಂಬ ವಾಣಿ ಹಲವು ಕಂಠಗಳಿಂದ ಹೊರಡುತ್ತಿದೆ.

ಹೀಗೆ ಜಗತ್ತಿನಲ್ಲಿ ಶಿಷ್ಟರನ್ನು ಪಾಲಿಸುವುದಕ್ಕೂ, ದುಷ್ಟರನ್ನು ಸಂಹಾರ ಮಾಡುವುದಕ್ಕೂ ಭಗವಂತನು ಅನೇಕ ಅವತಾರಗಳನ್ನು ಎತ್ತಿದ್ದಾನೆ. ತನ್ನ ಮಹಿಮೆಯನ್ನು ಹಲವು ರೀತಿಗಳಲ್ಲಿ ತೋರಿಸಿಕೊಟ್ಟಿದ್ದಾನೆ. ಮಹಿಷಿ ಎಂಬ ರಕ್ಕಸಿಯೋರ್ವಳ ಸಂಹಾರಕ್ಕಾಗಿ ಹರಿ–ಹರ ಸುತನಾಗಿ ಶ್ರೀ ಅಯ್ಯಪ್ಪ ಸ್ವಾಮಿಯು ಅವತಾರವೆತ್ತಿದನು.

ಹಿಂದಿನ ಕಾಲದಲ್ಲಿ ರಾಕ್ಷಸರಿಗೂ, ದೇವತೆಗಳಿಗೂ ಆಗಾಗ ಯುದ್ಧಗಳಾಗುತ್ತಿತ್ತು. ಅದರಲ್ಲಿ ರಾಕ್ಷಸರವೇ ಮೇಲುಗೈಯ್ಯಾಗುತ್ತಿತ್ತು. ಈ ಪ್ರಸಂಗ ಬಂದಾಗ ದೇವತೆಗಳು ಕಂಗೆಡುತ್ತಿದ್ದರು.

ಪೂರ್ವಕಾಲದಲ್ಲಿ "ದನು" ಎಂಬ ಒಬ್ಬ ದೈತ್ಯನಿದ್ದನು. ಅವನ ಎರಡನೆಯ ಮಗನಾದ ಕರಂಬನಿಗೆ ಮಹಿಷಿ ಎಂಬ ಮಗಳೂ ಮಹಿಷಾಸುರನೆಂಬ ಮಗನೂ ಇದ್ದರು. ಮಡದಿ ಲೀಲಾಳಿಂದ ಶಾಪಗ್ರಸ್ತನಾದ ದತ್ತನು, ಶಾಪದ ಫಲದಿಂದ ಕೋಣನಾಗಿ ಹುಟ್ಟಿದನು. ದತ್ತನು ಮಡದಿಗಿತ್ತ ಶಾಪದ ಫಲವಾಗಿ ಲೀಲಾ ಎಮ್ಮೆರೂಪದಿಂದ ಜನಿಸಿದಳು. ಇವರಿಂದ ಮಹಿಷ, ಮಹಿಷಿ ಅಕ್ಕ–ತಮ್ಮರಾಗಿದ್ದರು.

ಮಹಿಷಾಸುರನು ತನಗೆ ದೇವತೆಗಳಿಂದ, ಮನುಷ್ಯರಿಂದ, ರಾಕ್ಷಸರಿಂದ ಮರಣವುಂಟಾಗಬಾರದೆಂದು ಬ್ರಹ್ಮನಿಂದ ವರವನ್ನು ಪಡೆದಿದ್ದನು. ಹೀಗೆ ಗರ್ವದಿಂದ ಉಬ್ಬಿಹೋದ ಮಹಿಷನು ದೇವತೆಗಳಿಗೆ ಆಗಾಗ ಉಪಟಳ ಕೊಡಲಾರಂಭಿಸಿದನು. ಇದರಿಂದ ಕಂಗೆಟ್ಟ ದೇವತೆಗಳು ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ದೂರುಕೊಟ್ಟರು. ತ್ರಿಮೂರ್ತಿಗಳು ದುರ್ಗಾದೇವಿಯನ್ನು ಸೃಷ್ಟಿಸಿದರು. ದುರ್ಗಾಮಾತೆಯಿಂದ ಮಹಿಷಾಸುರನ ಸಂಹಾರವಾಯಿತು.

ಮಹಿಷಿಗೆ ತನ್ನ ತಮ್ಮನ ಮರಣದಿಂದಾಗಿ ದುಃಖವಾಯಿತು. ಈ ಸೇಡನ್ನು ತೀರಿಸುವುದಕ್ಕಾಗಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಯಾವ ದೇವರುಗಳಿಂದಲೂ ತನಗೆ ಮರಣ ಬರಕೂಡದೆಂದು ಬೇಡಿದಳು. ಬ್ರಹ್ಮನು ವರವನ್ನು ಕರುಣಿಸಿ "ಮಹಿಷಿ, ನಿನಗೆ ಹರಿ–ಹರ ಪುತ್ರನಿಂದ ಮರಣವುಂಟಾಗುತ್ತದೆ" ಎಂದನು.

ಮಹಿಷಿಯು ನಗುತ್ತಾ - 'ಹರಿ – ಹರ ಇಬ್ಬರೂ ಗಂಡು ದೇವತೆಗಳು. ಇವರಿಗೆ ಮಕ್ಕಳಾಗುವುದೆಂದರೇನು? ಅದು ಸುಳ್ಳು. ನನಗೆ ಮರಣವೇ ಇಲ್ಲ' ಎಂದುಕೊಂಡು



ಶ್ರೀಮತಿ ವಿಶಾಲಾಕ್ಷಿ ಕೆ. ಭಟ್

ದೇವತೆಗಳಿಗೆ ಉಪದ್ರವ ಕೊಡಲಾರಂಭಿಸಿದಳು.

ಸಮುದ್ರ ಮಥನಕಾಲದಲ್ಲಿ ಮೋಹಿನಿ ರೂಪಧರಿಸಿದ ಹರಿಯಲ್ಲಿ ಹರನು ಮೋಹಿತನಾಗಿ ಕೂಡಿದ ಪರಿಣಾಮವಾಗಿ ಅಯ್ಯಪ್ಪ ಸ್ವಾಮಿಯ ಜನನವಾಯಿತು. ಮಹಿಷಿಯ ಸಂಹಾರಕ್ಕಾಗಿ ಜನಿಸಿದ ಅಯ್ಯಪ್ಪನು ಹನ್ನೆರಡು ವರ್ಷರಾಜನೊಬ್ಬನ ಅಡಿಯಾಳಾಗಿರಬೇಕಿತ್ತು. ಶಿವನು ಮಗುವನ್ನು ಕಾಡಿನಲ್ಲಿ ಬಿಟ್ಟುಹೋಗುವನು.

ಪಂದಳ ರಾಜನಾದ ರಾಜಶೇಖರನಿಗೆ ಹಲವು ಕಾಲದಿಂದ ಮಕ್ಕಳಿಲ್ಲದ ಕೊರಗು ಬಾಧಿಸುತ್ತಿತ್ತು. ಒಂದು ದಿನ ರಾಜನು ಪಂಪಾನದಿ ತೀರದಲ್ಲಿ ಬೇಟೆಯಾಡುತ್ತಿದ್ದಾಗ ಚಿಕ್ಕಮಗುವೊಂದು ಅಳುವ ಸ್ವರ ಕೇಳಿತು. ಹತ್ತಿರ ಹೋಗಿ ನೋಡಿ ಹಾಲು ಹಸುಳೆಯನ್ನು ಕೈಗೆತ್ತಿಕೊಂಡು "ಆಹಾ! ಎಷ್ಟು ಸುಂದರವಾದ ಮಗು. ಯಾರು ಈ ತೇಜಸ್ವಿಯಾದ ಬಾಲಕನನ್ನು ಈ ಅರಣ್ಯದಲ್ಲಿ ಬಿಟ್ಟುಹೋದರೋ?" ಎನ್ನುತ್ತಿದ್ದಂತೆ ವೃದ್ಧನ ರೂಪ ಧರಿಸಿದ ಹರಿಯು "ರಾಜಾ, ನಿನಗೆ ಮಕ್ಕಳಿಲ್ಲದ ಕಾರಣ ದೇವರೇ ದಯಪಾಲಿಸಿದ ಈ ಮಗುವನ್ನು ನೀನು ಸಾಕಿ ಸಲಹು. ಮಗುವಿನ ಕಂಠದಲ್ಲಿ ಮಣಿಸರವಿರುವುದರಿಂದ "ಮಣಿಕಂಠ" ಎಂದು ನಾಮಕರಣ ಮಾಡು" ಎಂದು ಹೇಳಿ ಮಾಯವಾದನು.

ರಾಜಶೇಖರನು ಸುಂದರವಾದ ಮಗುವನ್ನು ಅರಮನೆಗೆ ಕೊಂಡುಹೋಗಿ ಮಡದಿಯ ಕೈಗೊಪ್ಪಿಸಿದನು. ದಂಪತಿಗಳಿಬ್ಬರೂ ಸಂತೋಷದಿಂದ ಮಗುವಿಗೆ "ಮಣಿಕಂಠ" ಎಂದು ನಾಮಕರಣ ಮಾಡಿದರು.

ರಾಜಶೇಖರನು ಮಗನಿಗೆ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿಸಿದನು. ಗುರುಕುಲದಿಂದ ಹಿಂತಿರುಗುವಾಗ ಅಯ್ಯಪ್ಪನು ಮಾಡಿದ ಪವಾಡವೆಂದರೆ ಗುರುಗಳಿಗೆ ಗುರುದಕ್ಷಿಣೆಯಾಗಿ ಅವರ ಮಗನಿಗೆ ಕುರುಡು ಕಣ್ಣುಹೋಗಿ ದೃಷ್ಟಿ ಬರುವಂತೆಯೂ, ಮೂಕನಾಗಿದ್ದುದರಿಂದ ಮಾತು ಬರುವಂತೆಯೂ ಮಾಡಿದ ಅದ್ಭುತ ಘಟನೆ.

ಗುರುಕುಲದಲ್ಲಿ ಕೆಲವು ವರ್ಷ ಕಳೆದು ಹಿಂತಿರುಗಿದ ಮಣಿಕಂಠನು ಅರಮನೆಯಲ್ಲಿ ತನ್ನ ಸಾಕುತಂದೆಗೆ ಮಗನೊಬ್ಬನ ಜನನವಾದುದನ್ನು ಕಂಡನು. ಅವನೇ ರಾಜರಾಜ.

ರಾಜಶೇಖರನ ಸೇವೆ ಮಾಡುತ್ತಾ ಮಣಿಕಂಠನು ಕಾಲ್ಕಳೆಯುತ್ತಿದ್ದನು. ರಾಜನಿಗೆ ವೃದ್ಧಾಪ್ಯ ಬರಲು ಮಣಿಕಂಠನಿಗೆ ಪಟ್ಟಾಭಿಷೇಕದ ವ್ಯವಸ್ಥೆ ಮಾಡುವಂತೆ ಮಂತ್ರಿಗೆ ಆಜ್ಞಾಪಿಸಿದನು. ಆದರೆ ದೈವಲೀಲೆಯನ್ನು ಬಲ್ಲವರಾರು? ಮಂತ್ರಿಯ ಇಚ್ಛೆಯೇ ಬೇರೆಯಾಗಿತ್ತು. ರಾಣಿಯ ಮಗನಾದ ರಾಜರಾಜ. ಇನ್ನೂ ಚಿಕ್ಕವ. ಅವನು ರಾಜನಾದರೆ ಅವನ ಹೆಸರಲ್ಲಿ ತನ್ನ ಹೊಟ್ಟೆ ಹೊರೆಯಬಹುದೆಂಬ ದುರಾಲೋಚನೆಯುಂಟಾಗಿ ಮಂತ್ರಿಯು ಮಣಿಕಂಠನು ರಾಜನಾಗುವುದನ್ನು ತಪ್ಪಿಸುವ ಸಲುವಾಗಿ ಸಂಚು ಹೂಡುತ್ತಿದ್ದನು. ರಾಣಿಯ ಮನಸ್ಸನ್ನು ಕೆಡಿಸಲು ಯತ್ನಿಸಿದನು. ಮಂತ್ರಿಯ ದುರಾಲೋಚನೆಗೆ ಬಲಿಯಾದ ರಾಣಿಯು ತನಗೆ ಹೊಟ್ಟೆನೋವೆಂದು ನಟಿಸುವಳು. ಮಂತ್ರಿಯಿಂದ ಲಂಚ ಪಡೆದ ರಾಜವೈದ್ಯರು ರಾಣಿಯನ್ನು ಪರೀಕ್ಷಿಸುವ ನಟನೆ ಮಾಡಿದರು. ರಾಣಿಯ ಹೊಟ್ಟೆಶೂಲೆಗೆ ಹುಲಿಯ ಹಾಲು ಅಗತ್ಯವಾಗಿ ಬೇಕೆಂದು ನುಡಿದರು.

ರಾಜನು ಹುಲಿಯ ಹಾಲನ್ನು ತರುವವರಾರೆಂದು ಚಿಂತಿಸುತ್ತಿರುವಾಗ ಮಣಿಕಂಠನು ತಾನೇ ಮುಂದಾಗಿ ಹುಲಿಯ ಹಾಲನ್ನು ತರಲು ಹೊರಡುವನು. 'ತನ್ನ ಯೋಜನೆ ಫಲಿಸಿತು. ಮಣಿಕಂಠನು ಹುಲಿಗಳ ಬಾಯಿಗೆ ತುತ್ತಾಗುವನೆಂಬ' ದುರಾಲೋಚನೆ ಮಂತ್ರಿಯ ಮನದಲ್ಲಿ ಆಗಾಗ ಮೂಡಬರಲಾರಂಭಿಸಿತು.

ರಾಜಶೇಖರನಿಗೆ ಮಣಿಕಂಠನಲ್ಲಿ ಅಪಾರ ಮಮತೆ. ಮಗನನ್ನು ಕಾಡಿಗೆ ಕಳುಹಿಸುವಾಗ ಕೆಲವು ಜನರನ್ನು ಅವನೊಂದಿಗೆ ಕಳುಹಿಸುವ ಆಲೋಚನೆಯಲ್ಲಿರುವಾಗ ಮಣಿಕಂಠನು "ಅಪ್ಪಾ, ನೀವು ಭಯಪಡಬೇಡಿ. ನಾನೀಗಲೇ ಅರಣ್ಯಕ್ಕೆ ಹೋಗಿ ಹುಲಿಯ ಹಾಲನ್ನು ತಂದು ಅಮ್ಮನ ಹೊಟ್ಟೆಶೂಲೆಯನ್ನು ವಾಸಿಮಾಡಲು ಸಹಕರಿಸುವೆ" ಎಂದು ಭರವಸೆಯಿತ್ತನು.

ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಮಣಿಕಂಠನು ಹೊರಡುವಾಗ ರಾಜನು ಅವನಿಗೆ ತೆಂಗಿನಕಾಯಿ ಒಂದನ್ನು ನೀಡಿ "ಮಗೂ, ಶಿವನಿಗಿರುವಂತೆ ಇದಕ್ಕೂ ಮೂರು ಕಣ್ಣುಗಳಿರುವುದರಿಂದ ಇದು ನಿನ್ನನ್ನು ರಕ್ಷಿಸುವುದು. ಇದನ್ನು ತೆಗೆದುಕೊ" ಎಂದು ಹೇಳಿ ಅವನನ್ನು ಬೀಳ್ಕೊಟ್ಟನು.

ಅರಣ್ಯದಲ್ಲಿ ಶಿವಗಣಗಳು ಮಣಿಕಂಠನ ಸೇವೆಗೆ ಮುಂದಾದವು. ಪಂಪಾನದಿಯ ತೀರದಲ್ಲಿರುವ ಋಷಿಗಳೆಲ್ಲಾ ಮಣಿಕಂಠನನ್ನು ಪೂಜಿಸಿ "ಅಯ್ಯಪ್ಪನ್" ಎಂದು ಕರೆದರು. ಅಯ್ಯಪ್ಪಸ್ವಾಮಿಯು ಕನಕ ಸಭೆ (ಚಿನ್ನದಿಂದ ಮಾಡಿದ ಸಭಾಭವನ) ಎಂಬಲ್ಲಿ ಋಷಿಗಳಿಗೆ ಬ್ರಹ್ಮಜ್ಞಾನವನ್ನು ಕರುಣಿಸಿದನು.

ಭೂಲೋಕದಲ್ಲಿ ಹನ್ನೆರಡು ವರ್ಷ ರಾಜಶೇಖರನ ಸೇವೆ ಮಾಡಿದ ಮಣಿಕಂಠನಿಗೆ ಅರಣ್ಯದಲ್ಲಿ ಮಹಿಷಿಯು ಎದುರಾದಳು. ಅವಳನ್ನು ಬಹಳ ಸುಲಭವಾಗಿ ಕೊಂದುಬಿಟ್ಟನು. ಕೂಡಲೇ ಅಲ್ಲಿ ಒಬ್ಬ ಸುಂದರ ಸ್ತ್ರೀಯು ಎದ್ದುನಿಂತು ತನ್ನ ಹಿಂದಿನ ಕತೆಯನ್ನೆಲ್ಲಾ ಹೇಳಿದಳು. ತ್ರಿಮೂರ್ತಿಗಳ ಅಂಶದಿಂದ ಜನಿಸಿದ ದತ್ತನ ಮಡದಿಯಾದ ನಾನು ಶಾಪದಿಂದ ಮಹಿಷಿಯಾದೆ. ಈಗ ನಿನ್ನಿಂದ ಸಂಹರಿಸಲ್ಪಟ್ಟು ಪುನಃ ಹಿಂದಿನ ರೂಪ ಅಂದರೆ ತ್ರಿಮೂರ್ತಿಗಳ ಪತ್ನಿಯರ ಅಂಶದಿಂದ ಜನಿಸಿದ "ಲೀಲಾ" ಆಗಿರುವೆ ಎಂದಳು. ಅಯ್ಯಪ್ಪನನ್ನು ಭಕ್ತಿಯಿಂದ ಪೂಜಿಸಿ ತನ್ನನ್ನು ಸತಿಯಾಗಿ ಸ್ವೀಕರಿಸೆಂದು ಬೇಡಿಕೊಳ್ಳಲು — ಮಣಿಕಂಠನು "ನಾನು ಬ್ರಹ್ಮಚಾರಿಯಾದುದರಿಂದ ನಿನ್ನನ್ನು ಲಗ್ನವಾಗಲಾರೆ. ಆದರೂ ನೀನು ನನ್ನ ಶಕ್ತಿಯಾಗಿ "ಮಾಳಿಗೆಪುರದ ಅಮ್ಮ" ಎಂದು ನನ್ನ ಸಮೀಪದಲ್ಲೆ ಇದ್ದುಕೊ ಎಂದನು.

ಮಹಿಷಿಯ ಸಂಹಾರ ಮಾಡಿ ಮಣಿಕಂಠನು ಕೈಲಾಸದಲ್ಲಿ ಶಿವ–ಪಾರ್ವತಿಯ

(36ನೇ ಪುಟ ನೋಡಿ

(8 ನೇ ಪುಟದಿಂದ)

ಪ್ರೀತನಾಗಿರಬೇಕು. ಶಾಂತನೂ ದಾಂತನೂ ವೇದಾದಿ ಸರ್ವ ಶಾಸ್ತ್ರ ಪ್ರವೀಣನೂ ಆಗಿರಬೇಕು. ಪ್ರಿಯಭಾಷಿಯೂ ಸರಳಹೃದಯನೂ ಆಗಿರಬೇಕು. ಪ್ರಜಾಭಿಪ್ರಾಯಕ್ಕೆ ಎಂದೂ ವಿರೋಧವಾಗಿ ನಡೆಯಕೂಡದು. ರಾಜ್ಯವನ್ನು ಭೋಗಸಾಮಗ್ರಿಯೆಂದು ಭಾವಿಸದೆ ಕರ್ತವ್ಯಪಾಲನೆಯ ಸಾಧನವೆಂದು ಭಾವಿಸಬೇಕು. ರಾಜ್ಯಪಾಲನೆಯಲ್ಲಿ ಯಾವ ಕಾರಣದಿಂದಲೂ ಪಕ್ಷಪಾತವನ್ನು ವಹಿಸಕೂಡದು.

ರಾಜಕಾರ್ಯನಿರ್ವಹಣೆಯು ಬಹಳ ಶ್ರಮವಾದ ಕಾರ್ಯವಾದುದರಿಂದ ಗೂಢಚಾರರ ಮೂಲಕ ಈ ಕಾರ್ಯವನ್ನು ಸಾಧಿಸಬೇಕು. ಅವರ ಚಲನವಲನಗಳು ಬಹು ರಹಸ್ಯವಾಗಿರಬೇಕು. ಚಾರರಲ್ಲಿಯೇ ಒಬ್ಬರ ವಿಷಯ ಮತ್ತೊಬ್ಬರಿಗೆ ಗೊತ್ತಾಗದಂತೆ ನೋಡಿಕೊಳ್ಳಬೇಕು ರಾಜ್ಯದ ಅನೇಕ ಕಡೆಗಳಲ್ಲಿಯೂ ಶತ್ರುರಾಜರ ಮಧ್ಯದಲ್ಲಿಯೂ ಅವರನ್ನು ನಿಲ್ಲಿಸಿ ವಿಷಯಸಂಗ್ರಹ ಮಾಡಬೇಕು. ಮಂತ್ರಿಗಳು ಮತ್ತು ಅಧಿಕಾರಿಗಳ ಕಾರ್ಯವನ್ನು ಆಗಾಗ ಗೂಢಚಾರರಿಂದಲೇ ವಿಚಾರ ಮಾಡುವುದು ಅವಶ್ಯಕ.

ರಾಜ್ಯದ ವಿಸ್ತಾರ ಹೆಚ್ಚಿದಷ್ಟೂ, ರಾಜ್ಯಕಾರ್ಯ ಬಹುಮುಖವಾದಷ್ಟೂ, ರಾಜನಿಗೆ ಮಂತ್ರಿ ಮಂಡಲದ ಅವಶ್ಯಕತೆಯುಂಟಾಗುತ್ತದೆ. ಸಾಧ್ಯವಾದಷ್ಟೂ ಅವರ ಅಭಿಪ್ರಾಯದಂತೆಯೇ ನಡೆದುಕೊಳ್ಳುವುದು ಒಳ್ಳೆಯದು. ಮಂತ್ರಿ ಮಂಡಲದಲ್ಲಿ ಅನೇಕ ಸದಸ್ಯರಿದ್ದರೂ ಬಹು ಮುಖ್ಯವಾದ ವಿಷಯಗಳಲ್ಲಿ ಕೆಲವೇ ಆಪ್ತ ಜನರ ಅಭಿಪ್ರಾಯವನ್ನು ಬಹು ರಹಸ್ಯವಾಗಿ ಅಂಗೀಕರಿಸಬೇಕು. ಮಂತ್ರಿಗಳಾದವರು ಪ್ರಾಮಾಣಿಕರೂ ರಾಜ್ಯಶಾಸ್ತ್ರಜ್ಞರೂ ಸರಳ ಜೀವಿಗಳೂ ಆತ್ಮಗೌರವವನ್ನುಳ್ಳವರೂ ನಿಷ್ಪಕ್ಷಪಾತಿಗಳೂ ಧರ್ಮಿಷ್ಠರೂ ಯಾವ ಪ್ರಲೋಭನೆಗೂ ಒಳಗಾಗದವರೂ ರಾಷ್ಟ್ರ ಮತ್ತು ರಾಜನ ಶ್ರೇಯಸ್ಸಿನಲ್ಲಿ ಸರ್ವದಾ ನಿರತರಾದವರೂ ಆಗಿರಬೇಕು.

ಕುಲೀನಾಃ ಶೀಲಸಂಪನ್ನಾಃ
ಇಂಗಿತಜ್ಞಾಃ ಅನಿಷ್ಠುರಾಃ ।
ದೇಶಕಾಲ ವಿಧಾನಜ್ಞಾಃ
ಭರ್ತೃಕಾರ್ಯಹಿತೈಷಿಣಃ ॥
ನಿತ್ಯಮರ್ಥೇಷು ಸರ್ವೇಷು
ರಾಜಾ ಕುರ್ವೀತ ಮಂತ್ರಿಣಃ ।

ಮಂತ್ರಿ ಮಂಡಲದ ಸಭೆಯು ಬಹು ರಹಸ್ಯವಾಗಿ ನಡೆಯಬೇಕು. ಮಂಡಲಿಯ ಸದಸ್ಯರು ಅಭಿಮಾನ ಸ್ವಾರ್ಥ ಅಥವಾ ಮತ್ಯಾವ ಕಾರಣಗಳಿಗಾಗಲೀ ಧರ್ಮೋಲ್ಲಂಘನೆ ಮಾಡಬಾರದು.

ನ್ಯಾಯ ನಿರ್ವಹಣೆಯ ಕಾರ್ಯವು ಎಲ್ಲ ವಿಧದಲ್ಲಿಯು ನಿಷ್ಪಕ್ಷಪಾತವಾಗಿ ನಡೆಯಬೇಕು. ಇದು ಸರ್ಕಾರದ ಕಾರ್ಯದಲ್ಲಿ ಬಹು ಪ್ರಧಾನವಾದುದು. ಆದುದರಿಂದ ಸತ್ಯವಂತರೂ ಸರಳ ಜೀವಿಗಳೂ ಧರ್ಮಾಭಿಮಾನಿಗಳೂ ಶಾಸನದ ಶಾಸ್ತ್ರಜ್ಞರಾದವರನ್ನು ನ್ಯಾಯಾಧೀಶನ್ನಾಗಿ ನೇಮಕ ಮಾಡಬೇಕು. ರಾಜನು ಆಗಾಗ ಅವರ ಕಾರ್ಯಗಳನ್ನು ವಿಮರ್ಶಿಸಿ ತಿಳಿದು ನ್ಯಾಯ ರಕ್ಷಣೆಯು ಸರಿಯಾಗಿ ನಡೆಯುತ್ತಿದೆಯೇ ಎಂಬುದನ್ನು ವಿಚಾರಿಸುತ್ತಿರಬೇಕು. ನ್ಯಾಯ ನಿರ್ವಹಣೆಯಲ್ಲಿ ಯಾವ ಪಕ್ಷಪಾತ ನಡೆಯಕೂಡದು. ವ್ಯಾಜ್ಯದಲ್ಲಿ ಉಭಯ ಪಕ್ಷದವರ ಅಹವಾಲುಗಳನ್ನು ಸರಿಯಾಗಿ ಕೇಳಿ ಧರ್ಮ ಅಥವಾ ಧರ್ಮಜ್ಞರ ಅಭಿಪ್ರಾಯದಂತೆ ತೀರ್ಮಾನಿಸಬೇಕು. ರಾಜ್ಯದ ಅಸ್ತಿತ್ವವು ಬಹು ಮಟ್ಟಿಗೆ ಊರಿರುವುದು ನ್ಯಾಯಾಂಗ ಶಾಖೆಯ ಕಾರ್ಯ ಕಲಾಪಗಳಿಂದಲೇನೇ.

ದಂಡ ನೀತಿಯ ನಿರ್ವಹಣೆಯಲ್ಲಿ ರಾಜನು ಬಹು ಎಚ್ಚರಿಕೆಯಿಂದ ಇರಬೇಕು. ಶಿಕ್ಷೆಯು ಅಪರಾಧಕ್ಕನುಗುಣವಾಗಿ ಇರಬೇಕು. ಸಾಧ್ಯವಾದಷ್ಟೂ ಹೆಚ್ಚಿನ ಜುಲ್ಮಾನೆಯನ್ನು ವಿಧಿಸಬಾರದು. ನ್ಯಾಯಾಲಯದ ದಂಡಶುಲ್ಕರೂಪದಲ್ಲಿ ಶೇಖರವಾಗುವ ಮೊಬಲಗು ಸರ್ಕಾರದ ಪ್ರಧಾನ ಉತ್ಪತ್ತಿಯೇ ಆದರೂ, ಆ ದೃಷ್ಟಿಯಿಂದಲೇ ದಂಡವನ್ನು ವಿಧಿಸಬಾರದು. ಸಾಧ್ಯವಾದಷ್ಟೂ, ಶರೀರಕ್ಕೆ ಆಘಾತವನ್ನುಂಟು ಮಾಡುವ ಶಿಕ್ಷೆಯನ್ನು ಮರಣ ದಂಡನೆಯನ್ನೂ ಮಿತವಾಗಿ ವಿಧಿಸಬೇಕು. ಮರಣ ದಂಡನೆಯನ್ನು ವಿಧಿಸಲೇಬಾರದೆಂದು ಕೆಲವು ನೀತಿಶಾಸ್ತ್ರಗಳು ಒತ್ತಾಯ ಪಡಿಸಿದರೂ ಮುಂದೆ ಜನರು ಅಂತಹ ಅಪರಾಧವನ್ನು ಮಾಡುವುದನ್ನು ತಡೆಗಟ್ಟಲು ಅನಿವಾರ್ಯವಾದ ಸಂದರ್ಭದಲ್ಲಿ ಮಾತ್ರ ಮರಣ ದಂಡನೆಯನ್ನು ಉಪಯೋಗಿಸಬೇಕು.

ರಾಜ್ಯ ಮತ್ತು ಪ್ರಜಾಕ್ಷೇಮಗಳಿಗೆ ವಿರೋಧವಾಗಿ ರಾಜನು ಯಾವ ಸ್ವಂತ ಕಾರ್ಯವನ್ನೂ ಮಾಡಬಾರದು. ಪ್ರಜೆಗಳಿಗೆ ಸೌಖ್ಯವನ್ನುಂಟು ಮಾಡುವಂತೆಯೇ ಅವರಿಗೆ ಉಂಟಾಗ ಬಹುದಾದ ವಿಪತ್ತನ್ನು ಪರಿಹರಿಸಬೇಕು. ಪ್ರಜೆಗಳ ಆಸ್ತಿಪಾಸ್ತಿಗಳಿಗೆ ಭಂಗ ಬರದಂತೆ ಕಳ್ಳಕಾಕರಿಂದಲೂ ದುಷ್ಟ ಮೃಗಗಳಿಂದಲೂ ಸಂರಕ್ಷಿಸಬೇಕು.

ರಾಜ್ಯಂ ಹಿ ಸುಮಹತ್ತಂತ್ರಂ
ಧಾರ್ಯತೇ ನಾಕೃತಾತ್ಮನಾ ।
ನ ಶಕ್ಯಂ ಮೃದುನಾ ವೋಢುಂ
ಆಯಾಸಸ್ಥಾನ ಮುತ್ತಮಂ ॥

ಮೇಲೆಯೇ ತಿಳಿಸಿರುವಂತೆ ರಾಜ ತಂತ್ರವು ಅಶಕ್ತನಾದವನಿಂದ ಧರಿಸಲು ಅಶಕ್ಯವಾದ ಬಹು ಕಠಿಣವಾದ ಕಾರ್ಯ. ಪ್ರಜಾಪ್ರೀತಿಯನ್ನು ಸಂಪಾದಿಸುವುದೇ ಒಂದು ಮುಖ್ಯ ಧ್ಯೇಯವಾಗಿರಬೇಕು. ಸ್ತ್ರೀಯರ ಸಂರಕ್ಷಣೆ ಅವನ ಕರ್ತವ್ಯಗಳಲ್ಲಿ ಪ್ರಧಾನವಾದುದು. ಮದ್ಯವಿಕ್ರಯ ಮಾಡುವ ಅಂಗಡಿಗಳಿಂದಲೂ ಜೂಜಿನ ಕಟ್ಟೆಗಳಿಂದಲೂ ವೇಶ್ಯಾವಾಟಿಕೆಗಳಿಂದಲೂ ಸ್ತ್ರೀಹರಣ ಮಾಡುವವರಿಂದಲೂ, ಪ್ರಜೆಗಳಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ರಾಜ್ಯದಲ್ಲಿ ಭಿಕ್ಷುಕರು ಕಳ್ಳರು ಹೆಚ್ಚದಂತೆ ನೋಡಿಕೊಳ್ಳುವುದು ಅಷ್ಟೆ ಅವಶ್ಯಕ. ಅಶಕ್ತರಾದವರಿಗೆ ಅವರ ಅವಶ್ಯಕತೆಯನ್ನು ಪೂರ್ಣ ಮಾಡುವುದೂ, ಕಳ್ಳತನ ದಿಂದ ದ್ರವ್ಯವನ್ನು ಕಳೆದುಕೊಂಡವರಿಗೆ ಅವರ ನಷ್ಟದ್ರವ್ಯವನ್ನು ತುಂಬಿ ಕೊಡುವುದೂ ಅವಶ್ಯಕ.

ಧರ್ಮಾಯ ರಾಜಾ ಭವತಿ
ನ ಕಾಮ ಕರಣಾಯ ಚ ।
ರಾಜಾ ಚರತಿ ಚೇತ್ ಧರ್ಮಂ
ದೇವತಾ ಏವ ಕಲ್ಪತೇ ।
ಸ ಚೇದಧರ್ಮಂ ಚರತಿ
ನರಕಾಯೈವ ಗಚ್ಛತಿ

ರಾಜನು ಗರ್ಭಿಣಿಸ್ತ್ರೀಯು ತನ್ನ ಗರ್ಭಸ್ಥ ಶಿಶುವಿಗೆ ಬಾಧೆಯುಂಟಾಗದಂತೆ ತನ್ನ ಆಹಾರ ವಿಹಾರಗಳನ್ನು ನಿಷ್ಕರ್ಷಿಸುವ ರೀತಿಯಲ್ಲಿ ರಾಜನು ಪ್ರಜಾಸಂರಕ್ಷಣೆ ಕಾರ್ಯದಲ್ಲಿ ತನ್ನ ಆಶ್ರಯದಲ್ಲಿರುವ ಪ್ರಜಾಕೋಟಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು.

ಶತ್ರುಗಳು ಎಷ್ಟೇ ದುರ್ಬಲರಾದರೂ ಅವರನ್ನು ಉದಾಸೀನಮಾಡದೆ ಕಾಯುತ್ತಿದ್ದು, ಸಮಯ ನೋಡಿ ನಿರ್ಮೂಲನ ಮಾಡಬೇಕು. ಬೆಂಕಿಯು ಎಷ್ಟೇ ಸಣ್ಣದಾದರೂ ಅದು ನಗರವನ್ನೇ ನಾಶಪಡಿಸಲು ಸಾಧ್ಯ. ರಾಜ್ಯದ ಗಡಿಯನ್ನು ರಕ್ಷಿಸುವುದರಲ್ಲಿ ರಾಜನಿಗೆ ಜಲ, ಪರ್ವತ, ಅರಣ್ಯ ಮೊದಲಾದ ಆರು ದುರ್ಗಗಳಲ್ಲಿ ಮನುಷ್ಯ ದುರ್ಗವೇ ಬಹು ಬಲಿಷ್ಠವಾದುದರಿಂದ ಅದನ್ನೇ ಬಲಪಡಿಸಬೇಕು. ಸಾಮದಾನ ದಂಡ ಭೇದಗಳಲ್ಲಿ ಮೊದಲನೆಯದು ಸಾಧ್ಯವಾಗದಿದ್ದರೆ ಮಾತ್ರ ಮುಂದಿನದನ್ನು ಅವಲಂಬಿಸಬೇಕು ಶತ್ರು ಬಹು ಬಲಿಷ್ಠನೆಂದು ತೋರಿದಾಗ ಸಾಧ್ಯವಾದಷ್ಟು ಸಂಧಿಗೆ ಪ್ರಯತ್ನಪಡಬೇಕು. ಪರದೇಶದಲ್ಲಿಯೂ ಗೂಢಚಾರರನ್ನು ಏರ್ಪಡಿಸಿ ಅವರಿಂದ ಅವರ ದೌರ್ಬಲ್ಯಗಳನ್ನು ತಿಳಿದುಕೊಳ್ಳಬೇಕು.

ರಾಜ್ಯಾಡಳಿತಕ್ಕೆ ದ್ರವ್ಯ ಸಂಪಾದನೆ (ಹಣವನ್ನು ಸಂಪಾದನೆ ಮಾಡುವುದು) ಆವಶ್ಯಕವಾದರೂ, ಅದು ಧರ್ಮಮಾರ್ಗದಲ್ಲಿಯೇ ನಡೆಯಬೇಕು. ತಪ್ಪಿತಸ್ಥರಿಂದ ದಂಡವನ್ನು ಶೇಖರಿಸಬಹುದು. ವ್ಯಾಪಾರಗಳಿಂದ ಮಿತವಾದ ತೆರಿಗೆ

ಗಳನ್ನು ಶೇಖರಿಸಬೇಕು. ತೆರಿಗೆಯನ್ನು ನಿಷ್ಕರ್ಷಿಸುವಾಗ ಪದಾರ್ಥಗಳ ಬೆಲೆ ಸಾಗಾಣಿಕೆಯ ವೆಚ್ಚ ನಿರ್ವಹಣೆಯ ಶುಲ್ಕ, ವ್ಯಾಪಾರಿಯ ಜೀವನದ ಅವಶ್ಯಕತೆ–ಇವುಗಳನ್ನು ಪೂರ್ಣವಾಗಿ ವಿಚಾರ ಮಾಡಬೇಕು. ಉದ್ಯೋಗ ಕ್ಷೇತ್ರದಲ್ಲಿಯೂ ನಿವ್ವಳ ಆದಾಯದ ಮೇಲೆ ತೆರಿಗೆಯನ್ನು ವಿಧಿಸಬೇಕು. ಸುಂಕವು ಎಂದಿಗೂ ಉತ್ಪಾದನೆಗೆ ಮಾರಕವಾಗಿರಬಾರದು. ಲಾಭಕ್ಕನುಗುಣವಾಗಿರಬೇಕು. ಜೇನು ಹುಳುವು ಹೂವಿಗೆ ತೊಂದರೆಯಾಗದಂತೆ ಮಕರಂದ ಪಾನ ಮಾಡುವಂತೆ ರಾಜನು ಸಂಬಂಧಪಟ್ಟವರಿಗೆ ತೊಂದರೆಯಾಗದಂತೆ ತೆರಿಗೆಯನ್ನು ಶೇಖರಿಸಬೇಕು. ಯುದ್ಧ ಮೊದಲಾದ ವಿಶೇಷ ಸಂದರ್ಭದಲ್ಲಿ ರಾಷ್ಟ್ರಾಭಿವೃದ್ಧಿಯ ದೃಷ್ಟಿಯಿಂದ ಜನರನ್ನು ಒಲಿಸಿ ಅವರ ಒಪ್ಪಿಗೆಯ ಮೇಲೆ ವಿಶೇಷ ಕರ ಸಂಗ್ರಹ ಮಾಡಬಹುದು ಹಾಗೆ ಶೇಖರವಾದ ಮೊಬಲಗು ಪೂರ್ಣವಾಗಿ ಆಯಾ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗವಾಗಬೇಕು.

ರಾಜ್ಯದ ಅಭಿವೃದ್ಧಿ ದೃಷ್ಟಿಯಿಂದ ವ್ಯವಸಾಯ ಭೂಸಂರಕ್ಷಣೆ ವಾಣಿಜ್ಯ ಮತ್ತು ಉದ್ಯೋಗಗಳ ಬೆಳವಣಿಗೆ ನಿರಂತರವಾಗಿ ಬೆಳೆಯುತ್ತಲೇ ಇರಬೇಕು. ಆಮೂಲಕ ಧನಧಾನ್ಯ ಸಮೃದ್ಧಿಗೆ ವಿಶೇಷ ಗಮನ ಕೊಡಬೇಕು. ಅಲ್ಲದೆ ರಾಜ್ಯದಲ್ಲಿ ಯಾವಾಗಲೂ ಆಹಾರ ಧಾನ್ಯಗಳ ಕೊರತೆಯಿರಬಾರದು ಆ ಉಗ್ರಾಣಗಳು ಪ್ರಾಮಾಣಿಕ ಅಧಿಕಾರಿಗಳ ವಶದಲ್ಲಿರಬೇಕು.

ರಾಜ್ಯದ ಕಾರ್ಯವು ಸುಲಲಿತವಾಗಿ ನಡೆಯಬೇಕಾದರೆ ಯೋಗ್ಯರಾದ ಅಧಿಕಾರಿಗಳ ನೇಮಕ ಅತ್ಯಾವಶ್ಯಕ ಕೃತಜ್ಞತೆ ಇಲ್ಲದವರನ್ನು ಸ್ವಾರ್ಥ ಸಾಧನೆಯವರನ್ನೂ, ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳುವವರನ್ನೂ, ವೇತನಕ್ಕಾಗಿಯೇ ಕೆಲಸಮಾಡುತ್ತಿರುವೆಂಬ ಅಭಿಪ್ರಾಯವುಳ್ಳವರನ್ನೂ, ಅಧಿಕಾರಿಗಳನ್ನಾಗಿ ನೇಮಿಸಬಾರದು.

ರಾಜನು ಧರ್ಮವಾಗಿ ನಡೆದರೆ ಪ್ರಜೆಗಳೂ ಧರ್ಮವಾಗಿ ನಡೆಯುತ್ತಾರೆ. 'ಯಥಾ ರಾಜಾ ತಥಾ ಪ್ರಜಾಃ' ಎಂಬ ವಾಕ್ಯವು ಇದೇ ಅರ್ಥವನ್ನು ಸ್ಪಷ್ಟಗೊಳಿಸುತ್ತದೆ. ಆದುದರಿಂದ ಎಲ್ಲ ಕಾಲದಲ್ಲಿ ನಡೆಯುವ ಸುಕೃತ ದುಷ್ಕೃತಗಳಿಗೆ ರಾಜನೇ ಕಾರಣ. ರಾಜಾ ಕಾಲಸ್ಯ ಕಾರಣಂ' ಎಂಬ ವಾಕ್ಯವು ಎಲ್ಲಕಾಲಕ್ಕೂ ಅನ್ವಯಿಸುತ್ತದೆ.

ವೇದವ್ಯಾಸರ ರಾಜಧರ್ಮ ಮೀಮಾಂಸೆಯಲ್ಲಿ ರಾಜನಷ್ಟೇ ಪ್ರಜೆಗಳಿಗೂ ಕರ್ತವ್ಯ ಕರ್ಮಗಳೂ ಗುಣದೋಷಗಳೂ ಸ್ಪಷ್ಟೀಕೃತವಾಗಿವೆ. ಪ್ರಜೆಗಳನ್ನು ವಿವಿಧ ವರ್ಣಗಳಾಗಿಯೂ ಅದರಲ್ಲಿ ಭಿನ್ನ ಭಿನ್ನ ಆಶ್ರಮದವರನ್ನಾಗಿಯೂ ವರ್ಗೀಕರಿಸಿ ಅವರವರ ಗ್ರಾಹ್ಯ ತ್ಯಾಜ್ಯ ವಿಷಯಗಳನ್ನು ವಿಶದೀಕರಿಸಿ, ಪ್ರತಿ ಪ್ರಜೆಯೂ ವ್ಯಕ್ತಿಗೂ ರಾಷ್ಟ್ರಕ್ಕೂ ತೊಂದರೆಯಾಗದಂತೆ ಧರ್ಮಾನುಗುಣವಾಗಿ ನಡೆಯಬೇಕೆಂಬ ಆಶಾಂತಿಗೂ ಅವಕಾಶವಿರುವುದಿಲ್ಲ.

ಹೀಗೆ ಮಹಾಭಾರತವು ಅಖಂಡಪ್ರಂಪಚದ ವಿಶ್ವಶಾಂತಿಗೆ ಸಾಧಕವಾದ ಸಾರ್ವಕಾಲಿಕ ಸಾರ್ವತ್ರಿಕ ಮಾರ್ಗದರ್ಶನ ಮಾಡಿ ಪ್ರತಿಯೊಬ್ಬ ಮಾನವನೂ ವಿಶ್ವಮಾನವನಾಗುವ ರೀತಿಯನ್ನು ಸ್ಫುಟಗೊಳಿಸಿ ಐಹಿಕಾಮುಷ್ಮಿಕ ಸೌಖ್ಯಗಳಿಗೆ ಸಹಾಯಕವಾಗುವುದಲ್ಲದೆ, ಪರಮ ಪುರುಷಾರ್ಥವಾದ ಪರಬ್ರಹ್ಮ ಸಾಕ್ಷಾತ್ಕಾರಕ್ಕೆ ಅವಕಾಶ ಕಲ್ಪಿಸುವುದರಿಂದ ಅದರ ವ್ಯಾಸಂಗವು ಸಮಸ್ತ ಮನುಷ್ಯರಿಗೂ ಅವಶ್ಯಕವೇ ಅಲ್ಲದೆ ಅನಿವಾರ್ಯವೂ ಆಗಿದೆ.



(34ನೇ ಪುಟದಿಂದ)

ಅನುಗ್ರಹ ಪಡೆದು, ಅವರು ಕೊಟ್ಟ ಹುಲಿಗಳ ಹಿಂಡಿನೊಂದಿಗೆ ಊರಿಗೆ ಮರಳಿದನು. ಊರಿನ ಜನರು ಹುಲಿಗಳ ಹಿಂಡನ್ನು ನೋಡಿ ಗಾಬರಿಯಿಂದ ಓಡಿಹೋಗಲಾರಂಭಿಸಿದರು. ಮಣಿಕಂಠನು ಹುಲಿಯ ಮೇಲಿಂದ ಇಳಿದು ರಾಜನ ಕಾಲಿಗೆರಗಿದನು. ಮಗನು ಸುರಕ್ಷಿತವಾಗಿ ಮರಳಿ ಬಂದನೆಂದು ರಾಜನು ಅವನನ್ನು ಮುದ್ದಾಡಿದನು. ಹುಲಿಗಳ ಹಿಂಡನ್ನು ನೋಡಿ ಅವನ ಸಾಹಸಕ್ಕೆ ಬೆರಗಾದನು.

"ಅಮ್ಮಾ, ನಿನಗಾಗಿ ತುಂಬಾ ಹುಲಿಗಳನ್ನೇ ತಂದಿದ್ದೇನೆ". ಬೇಕಾದಷ್ಟು ಹುಲಿ ಹಾಲನ್ನು ಹಿಂಡಿ ಕುಡಿಯಬಹುದೆಂದು ರಾಣಿಗೆ ತಿಳಿಸಿದನು. ಆಗ ರಾಣಿಯು, "ಮಗನೇ, ನಾನು ತಿಳಿಯದೆ ಮಾಡಿದ ಅಪರಾಧಗಳನ್ನು ಮನ್ನಿಸು. ಈ ಹುಲಿಗಳನ್ನು ಅರಣ್ಯಕ್ಕೆ ಬಿಟ್ಟುಬಾ. ನನಗೆ ಭಯವಾಗುತ್ತಿದೆ" ಎಂದು ಬೇಡಿಕೊಂಡಳು.

ಅಷ್ಟರಲ್ಲೇ ಹುಲಿಗಳು ತಮ್ಮ ಕಾರ್ಯವಾಯಿತೆಂದು ಮಾಯವಾಗಿಬಿಟ್ಟವು. ಇವುಗಳನ್ನೆಲ್ಲಾ ಆಶ್ಚರ್ಯದಿಂದ ನೋಡುತ್ತಿದ್ದ ರಾಜಶೇಖರನು, "ಮಣಿಕಂಠಾ, ನೀನು ಸಾಮಾನ್ಯ ಮನುಷ್ಯನಲ್ಲ. ಅವತಾರ ಪುರುಷನೇ ಆಗಿದ್ದೀ. ನೀನು ನನ್ನ ಮಗನೆಂದೇ ತಿಳಿದು ತೊಂದರೆ ಕೊಟ್ಟೆ. ನೀನು ಸಾಕ್ಷಾತ್ ಭೂತನಾಥನೇ. ನಿನ್ನ ನಿಜರೂಪವನ್ನು ತೋರಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡು ಸ್ವಾಮಿ" ಎಂದು ಬೇಡಿಕೊಂಡನು.

ಆಗ ಮಣಿಕಂಠನು 'ಭಕ್ತಿ, ದಯೆ, ಧೈರ್ಯಗಳಿಂದ ಅನುದಿನವೂ ಉತ್ತಮ ಕಾರ್ಯಗಳನ್ನೇ ಮಾಡುತ್ತಾ ಇದ್ದರೆ ನೀವು ಮುಕ್ತಿಯನ್ನು ಹೊಂದುವಿರಿ. ಪಂಪಾ ನದಿಯ ಈಶಾನ್ಯದಲ್ಲಿರುವ ಗುಡ್ಡದ ತುದಿಯಲ್ಲಿ ನನಗೆ ಗುಡಿಯನ್ನು ಕಟ್ಟಿಸಿ. ಈಗಾಗಲೇ ಶಬರಿಯು ನನ್ನ ದರ್ಶನಕ್ಕಾಗಿ ಕಾಯುತ್ತಿದ್ದಾಳೆ" ಎಂದು ಹೇಳಿ ಶಬರಿಗೆ ದರ್ಶನವೀಯಲು ಹೊರಟುಬಿಟ್ಟನು.

ರಾಜಶೇಖರನು ಸ್ವಾಮಿಯ ಅನುಗ್ರಹದಂತೆ ಗುಡಿಯನ್ನು ಕಟ್ಟಿಸಿದನು. ಶಬರಿಗೆ ಅನುಗ್ರಹವಿತ್ತ ಸ್ಥಳವಾದುದರಿಂದ ಅಲ್ಲಿಗೆ "ಶಬರಿ ಮಲೆ" ಎಂದು ಹೆಸರಾಯಿತು.

ಸ್ವಾಮಿಯು ಎಲ್ಲರಿಗೂ ದಿವ್ಯದರುಶನವಿತ್ತಾಗ ಎಲ್ಲರೂ "ಸ್ವಾಮಿಯೇ ಶರಣಂ ಅಯ್ಯಪ್ಪ" ಎಂದು ಸ್ತುತಿಸಲಾರಂಭಿಸಿದರು. ಅಷ್ಟರಲ್ಲೇ ಆ ದಿವ್ಯಸ್ವರೂಪವು ಗುಡಿಯೊಳಗೆ ಮಾಯವಾಗಿ ದಿವ್ಯಜ್ಯೋತಿಯೊಂದು ಭಕ್ತರ ಕಣ್ಣಿಗೆ ಕಾಣಿಸಿತು.

ಅಯ್ಯಪ್ಪಸ್ವಾಮಿಯು ತನ್ನ ಭಕ್ತರನ್ನು ಇಂದಿಗೂ ಕಾಪಾಡುತ್ತಾನೆ. ನಲವತ್ತೊಂದು ದಿವಸಗಳ ಬ್ರಹ್ಮಚರ್ಯವ್ರತ ಆಚರಿಸಿ, ಸಾವಿರಾರು ಮಂದಿ ಭಕ್ತರು ವರ್ಷಂಪ್ರತಿ ಶಬರಿಮಲೆ ಯಾತ್ರೆಯನ್ನು ಕೈಗೊಳ್ಳುತ್ತಾರೆ. ಮೂರು ಹೊತ್ತು ತಣ್ಣೀರುಸ್ನಾನ, ಜಪ, ಭಜನೆ, ಕಪ್ಪು ಬಟ್ಟೆ ಧರಿಸುವುದು, ದಿನಕ್ಕೊಂದು ಊಟ, ತಾವೇ ಊಟ ತಯಾರಿಸುವುದು, ಸಿಗರೇಟು ಮದ್ಯಮಾಂಸಗಳನ್ನು ತ್ಯಜಿಸುವುದು, ತಲೆ ಕೂದಲು, ಗಡ್ಡ ಮೀಸೆಗಳನ್ನು ಬೋಳಿಸದಿರುವುದು - ಈ ಕೆಲವು ನಿಯಮಗಳನ್ನು ಯಾತ್ರೆ ಮಾಡುವವರು ಭಕ್ತಿಪೂರ್ವಕವಾಗಿ ಆಚರಿಸಬೇಕು.

ಶಬರಿಮಲೆಯಲ್ಲಿ "ಮಂಡಲಪೂಜೆ' ಮತ್ತು "ಮಕರ ವಿಳಕ್ಕು" ಎಂಬ ಎರಡು ಉತ್ಸವಗಳಾಗುತ್ತವೆ. ಮಕರವಿಳಕ್ಕು ಜಾತ್ರೆಯಂದು ಶಬರಿಮಲೆಯ ಎದುರಿನ ಗುಡ್ಡದಲ್ಲಿ ಜ್ಯೋತಿ ಕಾಣುತ್ತದೆಂದು ಬಲ್ಲವರು ಹೇಳುತ್ತಾರೆ. ಶಬರಿಮಲೆ ಯಾತ್ರೆ ಮಾಡಿದರೆ ಕಾಶಿಯಾತ್ರೆ ಮಾಡಿದ ಪುಣ್ಯವೂ ಅಯ್ಯಪ್ಪ ದರ್ಶನದಿಂದ ಕಾಶೀ ವಿಶ್ವನಾಥನ ಪೂಜೆ ಮಾಡಿದ ಫಲವೂ ದೊರೆಯುತ್ತದೆಂದು ನಂಬಿಕೆ.



# ವಾರ್ತಾವಳಿ

## ಬೆಂಗಳೂರಿನಲ್ಲಿ ತಿ. ತಿ. ದೇ ಸಮಾಚಾರಕೇಂದ್ರ ಸಲಹಾಸಮಿತಿ

ಬೆಂಗಳೂರಿನ ತಿ.ತಿ.ದೇ. ಸಮಾಚಾರಕೇಂದ್ರ ಸಲಹಾ ಸಮಿತಿಯನ್ನು ಈಚೆಗೆ ಪುನರ್ವ್ಯವಸ್ಥೀಕರಿಸಲಾಯಿತು. ಸಲಹಾಸಮಿತಿಯಲ್ಲಿ ಈ ಕೆಳಕಂಡಂತೆ ಹೊಸ ಕಾರ್ಯಕಾರೀ ಸದಸ್ಯರು ನಿಯಮಿತರಾಗಿದ್ದಾರೆ.

ಅಧ್ಯಕ್ಷರು—ಶ್ರೀ ವಿ. ಆರ್. ನಾಯುಡು, ಕಾರ್ಯದರ್ಶಿ- ಶ್ರೀ ಎಸ್. ಆರ್. ಶ್ರೀನಿವಾಸನ್ ಸದಸ್ಯರು – ಸರ್ವಶ್ರೀ ಎಚ್. ಎಸ್. ಆರ್. ಅಯ್ಯಂಗಾರ್, ಎಸ್. ಆರ್. ಚಂದ್ರಶೇಖರ್, ಪ್ರಕಾಶ್‌ಸಿಂಧೆ, ಆರ್. ಆರ್. ಪಾರ್ವತೀಕರ್, ಪಿ. ಜಿ. ಬಚಂತಯ್ಯ, ಕೆ. ವಿ. ನರಸಿಂಹನ್, ವಿ. ಶ್ರೀನಿವಾಸನ್ ಹಾಗೂ ಶ್ರೀಮತಿಯರಾದ ಸುಶೀಲಮ್ಮ ವೇಣುಗೋಪಾಲನಾಯುಡು, ಎಚ್. ಬಿ. ವಾಸಂತಿದೇವಿ.

## ವೈಭವದಿಂದ ನಡೆದ ನವರಾತ್ರಿ ಬ್ರಹ್ಮೋತ್ಸವಗಳು

ತಿರುಮಲೆಯಲ್ಲಿ ಅಕ್ಟೋಬರ್ 14 ರಿಂದ ಅಕ್ಟೋಬರ್ 22 ರವರೆಗೆ ಶ್ರೀ ವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವಗಳು ವೈಭವ ಸಂಭ್ರಮಗಳಿಂದ ನಡೆದು ಹೆಚ್ಚಿನ ಭಕ್ತರನ್ನು ಆಕರ್ಷಿಸಿ ಯಶಸ್ವಿಯಾದವು.

ಗರುಡೋತ್ಸವದ ದಿನ 60 ಸಾವಿರಕ್ಕೂ ಮೀರಿದ ಯಾತ್ರಿಕರು ಸ್ವಾಮಿದರ್ಶನವನ್ನು ಪಡೆದರೆಂದು, ವರದಿಗಳು ತಿಳಿಸುತ್ತವೆ. ಅಂದು ಗರುಡೋತ್ಸವದ ಮೆರವಣಿಗೆಯಲ್ಲಿ ಅಪಾರ ಜನ ಗೋವಿಂದ ನಾಮಸ್ಮರಣ ಕೀರ್ತನೆಗಳೊಂದಿಗೆ ಸ್ವಾಮಿಸೇವೆಯಲ್ಲಿ ಭಾಗವಹಿಸಿದ್ದರು.

ಸೋಮವಾರ ನಡೆದ ರಜತ ರಥೋತ್ಸವದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಭಕ್ತರು ಪಾಲುಗೊಂಡಿದ್ದರು. ಆಂಧ್ರಪ್ರದೇಶದ ರಾಜ್ಯಪಾಲ ಡಾ॥ ಶಂಕರದಯಾಳ ಶರ್ಮ, ಅವರ ಪತ್ನಿ ವಿಮಲಾ ಶರ್ಮ, ರಾಜ್ಯ ಪ್ರಧಾನ ಕಾರ್ಯದರ್ಶಿ ಶ್ರೀ ಶ್ರಾವಣಕುಮಾರ್, ಮುಜರಾಯಿ ಇಲಾಖಾ ಮಂತ್ರಿ ಶ್ರೀ ಎಸ್. ಯತಿರಾಜಾರಾವ್ ಅವರುಗಳು ಭಾಗವಹಿಸಿದ್ದರು. ರಾಜ್ಯಪಾಲರು ಮಾರನೇ ದಿನದ ಚಕ್ರಸ್ನಾನದಲ್ಲೂ ಭಾಗವಹಿಸಿದ್ದರು.

ಈ ಬಾರಿಯ ಬ್ರಹ್ಮೋತ್ಸವಗಳಲ್ಲಿ ಆಂಧ್ರಪ್ರದೇಶದ ರಾಜ್ಯಪಾಲರೇ ಅಲ್ಲದೆ ಬಿಹಾರದ ರಾಜ್ಯಪಾಲ ಶ್ರೀ ಪಿ. ವೆಂಕಟಸುಬ್ಬಯ್ಯ, ಆಂಧ್ರ ಪ್ರದೇಶ್ ಸಾಂಕೇತಿಕ ವಿದ್ಯಾಶಾಖಾಮಂತ್ರಿ ಶ್ರೀ ಅಯ್ಯನ್ನ ಪಾತ್ರುಡು, ಪ್ರಧಾನ ನ್ಯಾಯಮೂರ್ತಿ ಶ್ರೀ ಭಾಸ್ಕರನ್, ಚಿತ್ತೂರು ಜಿಲ್ಲಾಧಿಕಾರಿ ಶ್ರೀ ಶ್ರೀಧರಶರ್ಮ, ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣ ರಾಜು ಮುಂತಾದ ಪ್ರಮುಖರೂ ಭಾಗವಹಿಸಿದ್ದರು.

ನವರಾತ್ರಿ ಬ್ರಹ್ಮೋತ್ಸವಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಗೆ 49.1 ಲಕ್ಷ ರೂಗಳ ಕಾಣಿಕೆ ಸಂದಿದೆಯೆಂದು ವರದಿಯಾಗಿದೆ. ಕೇವಲ ಹುಂಡಿಯ ಮೂಲಕವೇ ಸುಮಾರು 26.9 ಲಕ್ಷ ರೂಗಳ ಆದಾಯವಾಗಿದೆಯೆಂದು ಅಧಿಕಾರಿಗಳು ತಿಳಿಸಿದ್ದಾರೆ.

ಯಾತ್ರಿಕರ ರದ್ದತಿ ಹೆಚ್ಚುವುದೆಂದು ಮೊದಲೇ ನಿರೀಕ್ಷಿಸಿದ ತಿ. ತಿ. ದೇ. ಅದಕ್ಕೆ ತಕ್ಕ ಕ್ರಮಗಳನ್ನು ಕೈಗೊಂಡಿತ್ತು. ಹದಿಮೂರನೇ ತಾರೀಖಿನಿಂದಲೇ ಕಾಟೇಜು ರಿಸರ್ವೇಷನ್ ಅನ್ನು ಮನ್ನಾಮಾಡಿ 'ಮೊದಲು ಬಂದವರಿಗೆ ಮೊದಲು ವಸತಿ' ನೀಡುವ ವ್ಯವಸ್ಥೆಯಾಗಿತ್ತು. ತಿರುಮಲೆ ವಸತಿ ಸೌಕರ್ಯವನ್ನು ಹೆಚ್ಚಿಸಲು ತತ್ಕಾಲಿಕವಾಗಿ ಸ್ಥಳೀಯ ವಿದ್ಯಾಲಯಗಳನ್ನೂ ಬಳಸಲಾಯಿತು. ಉಪಹಾರ, ಭೋಜನಗಳ ಸೌಕರ್ಯಗಳಿಗಾಗಿ ಧರ್ಮದರ್ಶನ ಪ್ರಾಂಗಣವಾದ ವೈಕುಂಠದ ಎದುರು ಹೊಸದಾಗಿ ಫಲಹಾರ ಶಾಲೆಯನ್ನು ನಡೆಸಲಾಯಿತು.

ಯಾತ್ರಿಕರ ರಕ್ಷಣೆ ಶಾಂತಿಭದ್ರತಾ ಪರಿಪಾಲನೆಗಾಗಿ ಬೇರೆ ಜಿಲ್ಲೆಗಳಿಂದ ಸಿವಿಲ್, ರಿಸರ್ವ್ ಪೋಲೀಸರನ್ನು ಕರೆಸಲಾಗಿದ್ದು, ಹೆಚ್ಚಿಗೆ ಐದು ತತ್ಕಾಲಿಕ ಪೋಲೀಸ್ ಕೇಂದ್ರಗಳನ್ನು ತೆರೆಯಲಾಗಿತ್ತು. ಯಾತ್ರಿಕರ ಮಾರ್ಗದರ್ಶನಕ್ಕಾಗಿ ವಾಲಂಟಿಯರ್ಸ್, ಹೋಂಗಾರ್ಡ್‌ಗಳನ್ನು ಬಳಸಲಾಯಿತು. ಸ್ವಚ್ಛತೆ ಆರೋಗ್ಯಕರ ವಾತಾವರಣ ನಿರ್ಮಾಣಕ್ಕಾಗಿ ಹೆಚ್ಚಿನ ಶ್ಯಾನಿಟರಿ ಇನ್‌ಸ್ಪೆಕ್ಟರ್‌ಗಳನ್ನೂ, ಅತ್ಯವಸರ, ಪ್ರಥಮ ಚಿಕಿತ್ಸೆಗಳಿಗಾಗಿ ಹೆಚ್ಚಿನ ವೈದ್ಯಕೀಯ ಸಿಬ್ಬಂದಿಯನ್ನೂ ವ್ಯವಸ್ಥೆಗೊಳಿಸಲಾಗಿತ್ತು. ಯಾತ್ರಿಕರ ರದ್ದತಿಗೆ ಅನುಕೂಲವಾಗುವಂತೆ ಹೆಚ್ಚಿನ ಬಸ್‌ಗಳನ್ನೂ ನಡೆಸಲಾಯಿತು.

ಬ್ರಹ್ಮೋತ್ಸವದ ಪ್ರತಿದಿನವೂ ಬೆಳಗಿನಿಂದ ರಾತ್ರಿಯವರೆಗೆ ಹಲವು ರೀತಿಯ ಧಾರ್ಮಿಕ ಕಾರ್ಯಕ್ರಮಗಳು—ಹರಿಕಥೆ, ಸಂಗೀತ, ಭಜನೆ ಮೊದಲಾದವು ಏರ್ಪಾಡಾಗಿದ್ದವು. ಸ್ವಾಮಿ ಆಲಯದ ಎದುರಿನ ಆರ್ಟ್ಸ್ ಸದನ್‌ನಲ್ಲಿ ನಡೆದ ಈ ಕಾರ್ಯಕ್ರಮಗಳನ್ನು ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ. ಯ ಮೂಲಕ ವಿವಿಧ ಸ್ಥಳಗಳಲ್ಲಿ ಮುಖ್ಯವಾಗಿ ವೈಕುಂಠದಲ್ಲಿ ಸ್ವಾಮಿದರ್ಶನಕ್ಕಾಗಿ ಕಾದು ಕುಳಿತವರಿಗಾಗಿ ಪ್ರಸಾರ ಮಾಡಲಾಯಿತು.

## ತಿರುಮಲೆಯ ಬಸ್‌ಗಳಲ್ಲಿ ಭಕ್ತಿಗೀತೆಗಳು

ತಿರುಮಲೆಗೆ ಹೋಗುವ ಬಸ್‌ಗಳಲ್ಲಿ ಟೇಪ್ ರಿಕಾರ್ಡರ್‌ಗಳನ್ನು ಜೋಡಿಸಬೇಕೆಂದು ತಿ.ತಿ.ದೇ. ನಿರ್ಣಯಿಸಿದೆ. ತಿರುಮಲೆಗೆ ಹೋಗುವ ಯಾತ್ರಿಕರಿಗೆ ಪ್ರಶಾಂತ ವಾತಾವರಣವುಂಟಾಗಿಸಲು, ಬಸ್‌ಗಳಲ್ಲಿ ಅನ್ನಮಾಚಾರ್ಯ ಸಂಕೀರ್ತನೆಗಳನ್ನೂ ಇತರ ಭಕ್ತಿಗೀತೆಗಳನ್ನೂ ಕೇಳಿಸಬೇಕೆಂದು ತೀರ್ಮಾನಿಸಲಾಗಿದೆ.

ಈ ವಿಷಯವನ್ನು ತಿಳಿಸಿದ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು, ಒಂದು ಸಾವಿರ ರೂ.ಗಳ ವೆಚ್ಚದಲ್ಲಿ ಪ್ರತಿಯೊಂದು ಬಸ್‌ನಲ್ಲೂ ಟೇಪ್ ರಿಕಾರ್ಡರ್ ವ್ಯವಸ್ಥೆ ಮಾಡಲಾಗುವುದೆಂದೂ, ಕ್ಯಾಸೆಟ್‌ಗಳನ್ನು ನೀಡಲು ಅನ್ನಮಾಚಾರ್ಯ ಪ್ರಾಜೆಕ್ಟ್ ಸಿದ್ಧವಾಗಿದೆಯೆಂದೂ ತಿಳಿಸಿದರು.

ಸಧ್ಯದಲ್ಲಿ ಚಿತ್ತೂರು, ಗೂಡೂರು, ಮತ್ತಿತರ ಪ್ರಾಂತ್ಯಗಳಿಂದ ನಿತ್ಯವೂ ಸುಮಾರು 90 ಬಸ್‌ಗಳ ಯಾತ್ರಿಕರನ್ನು ನೇರವಾಗಿ ತಿರುಮಲೆಗೆ ಕೊಂಡೊಯ್ಯುತ್ತಿವೆ.

## ಅನ್ನಪ್ರಸಾದಗಳ ದರಗಳ ಏರಿಕೆ

ಶ್ರೀ ವೆಂಕಟೇಶ್ವರಸ್ವಾಮಿಯ ಆರ್ಜಿತ ಸೇವೆಗಳಲ್ಲಿನ ಅನ್ನಪ್ರಸಾದಗಳ ದರಗಳನ್ನು ಏರಿಸಲಾಗಿದೆ. ಆರ್ಜಿತ ಸೇವೆಗಳಲ್ಲಿ ಸ್ವಾಮಿಗೆ ನಿವೇದಿಸಲು ದೇವಸ್ಥಾನ ಭಕ್ತರಿಂದ ವಿವಿಧ ಪ್ರಸಾದಗಳಿಗಾಗಿ ಶುಲ್ಕವನ್ನು ಪಡೆದು ಅದರಿಂದ ಪ್ರಸಾದಗಳನ್ನು ತಯಾರಿಸಿ ಸ್ವಾಮಿಗೆ ಭಕ್ತರ ಹೆಸರಿನಲ್ಲಿ ನಿವೇದಿಸಿ, ನಿವೇದಿತ ಪ್ರಸಾದದ ಒಂದು ಪಾಲನ್ನು ಭಕ್ತರಿಗೆ ನೀಡುತ್ತ ಬಂದಿದೆ. ಈ ಶುಲ್ಕಗಳನ್ನು ಈಚೆಗೆ ಅಕ್ಕಿ, ಸಕ್ಕರೆ, ಏಲಕ್ಕಿ, ಮೊದಲಾದ ಪ್ರಸಾದ ಸಾಹಿತ್ಯದ ಬೆಲೆಗಳ ಏರಿಕೆಯಿಂದಾಗಿ ಪುನರ್ವಿಮರ್ಶಿಸಬೇಕಾಗಿ ಬಂದು, ಅವು ಈ ರೀತಿ ಇವೆ. ಪುಳಿಯೋಗರೆ—ರೂ 80 ರಿಂದ ರೂ 100, ಪೊಂಗಲ್—ರೂ 100 ರಿಂದ ರೂ 110, ಸಕ್ಕರೆ ಪೊಂಗಲ್—ರೂ 125 ರಿಂದ ರೂ 135, ಕೇಸರಿಭಾತ್—ರೂ 135 ರಿಂದ ರೂ

180, ಶಾಕರಭಾತ್ ರೂ 125 ರಿಂದ ರೂ 150, ಸೀರಾ–ರೂ 200 ರಿಂದ ರೂ 300.

## ಉಡುಪಿಯಲ್ಲಿ ಧರ್ಮಾಚಾರ್ಯರ ಸಮಾವೇಶ

ಹಿಂದೂ ಧರ್ಮದ ಭಾರತೀಯ ಧರ್ಮಾಚಾರ್ಯರ ಎರಡನೇ ಸಮಾವೇಶ ವಿಶ್ವಹಿಂದೂ ಪರಿಷತ್ತಿನ ಆಶ್ರಯದಲ್ಲಿ ಉಡುಪಿಯಲ್ಲಿ ಸೇರಿ ಹಿಂದೂ ಧರ್ಮದ ಪ್ರಗತಿಯತ್ತಣ ಪಯಣಕ್ಕೆ ಅನುಕೂಲವಾಗುವ ಅನೇಕ ವಿಷಯಗಳನ್ನು ಚರ್ಚಿಸಿ, ಉಪಯುಕ್ತ ನಿರ್ಣಯಗಳನ್ನು ಕೈಕೊಂಡಿದೆ.

ಸಮಾವೇಶದಲ್ಲಿ ವರದಕ್ಷಿಣೆ, ಅಸ್ಪೃಶ್ಯತೆ, ಭ್ರಷ್ಟಾಚಾರಗಳ ವಿರುದ್ಧ ಹಿಂದೂಗಳು ಸಾರ್ವತ್ರಿಕವಾಗಿ ಚಳುವಳಿ ಹೂಡಬೇಕೆಂದು ಕರೆ ನೀಡಲಾಯಿತು. ಸಮಾವೇಶವು ಕೈಗಾರಿಕೋದ್ಯಮಿಗಳು, ಸ್ವಯಂಸೇವಾ ಸಂಸ್ಥೆಗಳು, ಧರ್ಮಾಚಾರ್ಯರುಗಳು ಕನಿಷ್ಟ ಪಕ್ಷ ಒಂದೊಂದು ಜಿಲ್ಲೆಯನ್ನಾದರೂ ಧಾರ್ಮಿಕವಾಗಿ ದತ್ತು ಪಡೆದು, ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಹಿಂದುಳಿದ ವರ್ಗದವರಲ್ಲಿ ಆತ್ಮ ವಿಶ್ವಾಸವನ್ನು ತುಂಬಲು ಪ್ರಯತ್ನಿಸಬೇಕೆಂದು ಕರೆ ನೀಡಿತು.

ಸಮಾವೇಶವು ಶ್ರೀರಾಮ, ಶ್ರೀಕೃಷ್ಣರ, ಜನ್ಮಭೂಮಿಗಳನ್ನು ಮುಕ್ತಗೊಳಿಸಿ ಭಕ್ತರಿಗೆ ಪೂಜಾವಕಾಶ ಕಲ್ಪಿಸಿ ಕೊಡಬೇಕೆಂಬ ನಿರ್ಣಯವನ್ನು ಕೈಗೊಂಡಿತು.

ನಿರ್ಣಯಗಳ ಮೇಲಣ ಚರ್ಚೆ, ಭಾಷಣಗಳು ಸಂಸ್ಕೃತ, ತೆಲುಗು, ಹಿಂದಿ, ಆಂಗ್ಲ, ಮಲೆಯಾಳ, ಕನ್ನಡ, ಭಾಷೆಗಳಲ್ಲಿ ನಡೆದವು.

ದೇಶದ ವಿವಿಧ ಭಾಗಗಳಿಂದ 846 ಮಂದಿ ಧರ್ಮಾಚಾರ್ಯರು ಆಗಮಿಸಿದ ಸಮಾವೇಶದಲ್ಲಿ 17 ಮಂದಿ ಹರಿಜನ ಗಿರಿಜನಸ್ವಾಮಿಗಳೂ ಇದ್ದರು ಎಂಬುದು ಗಮನಾರ್ಹವಾಗಿದ್ದಿತು.

ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀವೀರೇಂದ್ರ ಹೆಗ್ಗಡೆಯವರು ಮಾತನಾಡುತ್ತ ಪೀಠಾಧಿಪತಿಗಳು ದರಿದ್ರನಾರಾಯಣನಲ್ಲಿ ಬೆರೆಯಲು ಮಠ ಗುಡಿಗಳನ್ನು ಬಿಟ್ಟು ಹೊರಬರಬೇಕು–ಎಂದು ಕರೆ ನೀಡಿದರು. ರಾಮನೇ ಎಲ್ಲರ ಬಳಿಗೂ ಹೋದಂತೆ ಸ್ವಾಮಿಗಳು ಸಾಮಾನ್ಯರಲ್ಲಿಗೆ ಹೋಗಬೇಕು–ಎಂದು ಅವರು ವಿವರಿಸಿದರು.

ಅತಿಥೇಯರಾದ ಪೇಜಾವರದ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳವರು ಇಡೀ ಸಮ್ಮೇಳನದ ವ್ಯವಸ್ಥೆಯನ್ನು ಸರ್ವರೂ ಮೆಚ್ಚುವ ಹಾಗೆ ನೋಡಿಕೊಂಡರು.

(ಕೃಪೆ: ಇಂಡಿಯನ್ ಎಕ್ಸ್‌ಪ್ರೆಸ್)

## ಕಲ್ಯಾಣಮಂಟಪಗಳಿಗಾಗಿ ೨ ಕೋಟಿ ರೂ.

ಂಧ್ರಪ್ರದೇಶದ ಎಲ್ಲ ಜಿಲ್ಲಾಕೇಂದ್ರಗಳಲ್ಲೂ ್ಯಾಣ ಮಂಟಪಗಳನ್ನು ನಿರ್ಮಿಸಲು ತಿ.ತಿ.ದೇ. ು ಕೋಟಿ ರೂಗಳನ್ನು ಮಂಜೂರು ಡಿದೆ. ಒಂದೊಂದು ಕಲ್ಯಾಣಮಂಟಪವನ್ನು ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲಾಗುವುದು ು ತಿ. ತಿ. ದೇ. ಚೀಫ್ ಇಂಜನೀಯರ್ ಶ್ರೀ . ರಂಗರಾಜು ಅವರು ತಿಳಿಸಿದ್ದಾರೆ.

ಾಲ್ಲೂಕು ಕೇಂದ್ರಗಳಲ್ಲೂ, ಪಟ್ಟಣಗಳಲ್ಲೂ ತ ಹಂತವಾಗಿ ಕಲ್ಯಾಣಮಂಟಪಗಳನ್ನು ್ಮಿಸಲಾಗುವುದು ಎಂದೂ,ತಾಲ್ಲೂಕು ಕೇಂದ್ರ ಲ್ಲಿ 7.5 ಲಕ್ಷ ರೂಗಳ ವೆಚ್ಚದಲ್ಲಿ 500 ದಿಗೆ ಅವಕಾಶವಾಗುವಷ್ಟು ದೊಡ್ಡದಾಗಿ ್ಮಿಸಲಾಗುವುದೆಂದೂ ಅವರು ನುಡಿದರು.

ಪ್ರೊದ್ದುಟೂರು, ನೆಲ್ಲೂರು, ಗುಂಟೂರು, ್ಯಂ, ವರಂಗಲ್, ಕರ್ನೂಲ್, ನಂದ್ಯಾಲ ಲ್ಲಿ ಕಲ್ಯಾಣಮಂಟಪ ನಿರ್ಮಾಣ ಪೂರ್ಣ ಂಡಿದೆ. ಮೆಹಬೂಬ್‌ನಗರ್, ಅನಂತ , ಕಾಕಿನಾಡ, ಮಚಲೀಪಟ್ಟಣ, ಗುಡಿವಾಡ ಲ್ಲಿ ನಿರ್ಮಾಣಕಾರ್ಯ ನಡೆಯುತ್ತಿದೆ.

ಕಡಪ, ವಿಜಯವಾಡ, ಆದಿಲಾಬಾದ್, ಾಮಾಬಾದ್, ತೆನಾಲಿಗಳಲ್ಲಿ 1200 ಮಂದಿಗೆ ಲಭ್ಯಗಳನ್ನು ಹೊಂದಿರುವಂತಹ ಕಲ್ಯಾಣ ಂಟಪಗಳ ನಿರ್ಮಾಣಕ್ಕೆ ಬೋರ್ಡ್ ನಿರ್ಣ ಸಿದೆಯೆಂದು ಅವರು ತಿಳಿಸಿದರು.

ಪ್ರತಿ ಕಲ್ಯಾಣಮಂಟಪದಲ್ಲೂ ತಿ. ತಿ. ದೇ. ಪ್ರಚಾರಕೇಂದ್ರ, ಹಾಗೂ ತಿ. ತಿ. ದೇ. ್ಮಿಕ ಪುಸ್ತಕ ಮಾರಾಟಕೇಂದ್ರಗಳನ್ನು ್ಪಡಿಸಲಾಗುವುದೆಂದೂ, ಧಾರ್ಮಿಕ ಕಾರ್ಯ ಮಗಳಿಗೂ ಅವಕಾಶ ಕಲ್ಪಿಸಲಾಗುವುದೆಂದೂ ರು ನುಡಿದರು.

## ರುಮಲೆಯಲ್ಲಿ ವಸತಿ ವಿತರಣೆಗೆ ಕಂಪ್ಯೂಟರ್ ಬಳಕೆ

ತಿರುಮಲೆಯಲ್ಲಿನ ಎಲ್ಲ ಕಡೆಯ ವಸತಿ ಸೌಲಭ್ಯ ಗನ್ನೂ ಕೇಂದ್ರ ಸ್ವಾಗತ ಕಚೇರಿಯಿಂದಲೇ ಾತ್ರಿಕರಿಗೆ ಹಂಚಿಕೆಯಾಗುವಂತೆ ವ್ಯವಸ್ಥೆ ಾಡಲಾಗಿದ್ದು, ಇದಕ್ಕಾಗಿ ಕಂಪ್ಯೂಟರ್ ಅನ್ನು ಳಸ ಬೇಕೆಂದು ತಿ. ತಿ. ದೇ. ತೀರ್ಮಾನಿಸಿದೆ. ಮೊದಲು ಟಿ. ಬಿ. ಸಿ, ಎ. ಟಿ. ಸಿ, ಎಂ. ಬಿ. ಸಿ, ಾಟೇಜುಗಳನ್ನು ಟಿ. ಬಿ. ವಿಚಾರಣಾ ಕೇಂದ್ರ ಲ್ಲಿಯೂ, ಆಯಾ ಅತಿಥಿಗೃಹಗಳ ಸ್ವಾಗತ ಕಚೇರಿಗಳಲ್ಲಿ ಅಲ್ಲಲ್ಲಿನ ಕೊಠಡಿಗಳನ್ನೂ ವಿತರಿಸಲಾಗುತ್ತಿದ್ದು, ಇದರಿಂದಾಗಿ ಯಾತ್ರಿಕರಿಗೆ ಇಲ್ಲಿಂದ ಲ್ಲಿಗೆ ವಸತಿ ಹುಡುಕಿಕೊಂಡು ಹೋಗುವ ಪರಿಸ್ಥಿತಿಯಿದ್ದು, ಈಗ ಎಲ್ಲವನ್ನೂ ಒಂದೇ ಛಾವಣಿಯಡಿಯಲ್ಲಿ ತರುವುದರಿಂದ ಯಾತ್ರಿಕರಿಗೆ ವಸತಿಗಾಗಿ ಓಡಾಡುವ ಪರಿಸ್ಥಿತಿ ತಪ್ಪಿದ್ದು, ಕಂಪ್ಯೂಟರೀಕರಣದಿಂದ ವಸತಿಯನ್ನು ಪಡೆಯುವ ಕ್ರಮ ವ್ಯವಸ್ಥೆಗೆ ಬರುವುದೆಂದು ಭಾವಿಸಲಾಗಿದೆ.

ಈ ಕಂಪ್ಯೂಟರೀಕರಣದ ಉಸ್ತುವಾರಿಯನ್ನು ಹೈದರಾಬಾದಿನ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಎಂಟರ್‌ಪ್ರೈಸಸ್ ಅವರಿಗೆ (ಸರಕಾರೀಸಂಸ್ಥೆ) ಒಪ್ಪಿಸಲು ತಿ. ತಿ. ದೇ. ಬೋರ್ಡ್ ತೀರ್ಮಾನಿಸಿದೆ.

ತಿರುಮಲೆಯ ಲಾಡು ಪ್ರಸಾದದ ಗುಣಮಟ್ಟವನ್ನು ಕಾಯುವ ಕೆಲಸವನ್ನು ಮೈಸೂರಿನ ಕೇಂದ್ರ ಆಹಾರ ಸಂಶೋಧನಾ ಸಂಸ್ಥೆ ಸಿ. ಎಫ್. ಟಿ ಆರ್. ಐಗೆ ಒಪ್ಪಿಸಿದ್ದು, ಅವರು ತಿರುಮಲೆಗೆ ತಮ್ಮ ಯಂತ್ರೋಪಕರಣಗಳನ್ನು ಉದ್ಯೋಗಗಳನ್ನೂ ಶೀಘ್ರದಲ್ಲಿಯೇ ತರಲಿದ್ದಾರೆಂದು ತಿಳಿದು ಬಂದಿದೆ. ಸ್ವಾಮಿ ಹುಂಡಿಯಲ್ಲಿ ಕಾಣಿಕೆಯಾಗಿ ಬರುವ ಚಿಲ್ಲರೆಹಣವನ್ನು, ವಿವಿಧ ರಖಮಿನ ನೋಟುಗಳನ್ನೂ ಎಣಿಸಲು ವಿದೇಶೀ ಯಂತ್ರೋಪಕರಣಗಳನ್ನು ಬಳಸಲಾಗುವುದೆಂದು ತಿ ತಿ ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣ ಅವರು ತಿಳಿಸಿದರು.

## ಕೌತಾಳದಲ್ಲಿ ಗುರುಜಗನ್ನಾಥ ದಾಸರ ಆರಾಧನೆ

ಆದವಾನಿ ಜಿಲ್ಲೆಯ ಕೌತಾಳದಲ್ಲಿ ಗುರುಜಗ

## ಕರ್ನೂಲಿನಲ್ಲಿ ಹೊಸ ಕಲ್ಯಾಣ ಮಂಟಪ

ಕರ್ನೂಲಿನಲ್ಲಿ ತಿ. ತಿ ದೇ. ಗಳು 25 ಲಕ್ಷ ರೂಗಳ ವೆಚ್ಚದಲ್ಲಿ ಹೊಸ ಕಲ್ಯಾಣ ಮಂಟಪವನ್ನು ನಿರ್ಮಿಸಿದೆ. ಇಲ್ಲಿ 1200 ಮಂದಿ ಒಟ್ಟಿಗೆ ಕುಳಿತುಕೊಳ್ಳಲೂ, 300 ಮಂದಿ ಒಂದೇ ಬಾರಿ ಊಟ ಮಾಡಲೂ ಸೌಕರ್ಯಗಳಿದ್ದು, 16 ಗ್ಯಾಸ್ ಒಲೆಗಳಿಂದ ಕೂಡಿದ ಆಧುನಿಕ ಪಾಕಶಾಲೆಯೂ ಇದೆ.

ಇಲ್ಲಿ ನಡೆಯುವ ವಿವಾಹಕ್ಕೆ ದಿನಂಪ್ರತಿ 1200 ರೂಗಳಂತೆಯೂ ಶಾಸ್ತ್ರೀಯ ಸಂಗೀತ, ನೃತ್ಯ ಹರಿಕಥೆ ಮೊದಲಾದ ಧಾರ್ಮಿಕ ಕಾರ್ಯಕ್ರಮಗಳಿಗೆ ದಿನಂಪ್ರತಿ 200 ರೂಗಳಂತೆಯೂ ಶುಲ್ಕ ನೀಡಬೇಕಾಗುತ್ತದೆ ಯೆಂದು ತಿಳಿಸಲಾಗಿದೆ.

ಸದರಿ ಕಲ್ಯಾಣಮಂಟಪವನ್ನು ಈಚೆಗೆ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ಉದ್ಘಾಟನೆ ಮಾಡಿದರು.



## ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ. ಜನವರಿ — 1986**

**ಉಡುಪಿ ಮತ್ತು ಪರ್ಯಾಯ**
– ವ್ಯಾಸಕೃಷ್ಣ ತಂತ್ರಿ

**ದಾಸಶ್ರೇಷ್ಠ ಪರಮದೇವ**
– ಕೆ. ಜಗನ್ನಾಥಶಾಸ್ತ್ರಿ

**ಕೂರೇಶರ ದೈವತತ್ತ್ವ**
– ಬಿ.ಎಸ್. ವಿಜಯಮ್ಮ

**ತಂದೆಗೆ ತಕ್ಕ ಮಗ**
– ವಿದ್ವಾನ್ ಬ.ನ. ಗುಂಡೂರಾವ್

**ಸಂಸ್ಕೃತದಲ್ಲಿ ನಿಘಂಟು ಮತ್ತು ಕೋಶಸಾಹಿತ್ಯ**
– ಡಾ॥ ಎನ್. ಅನಂತರಂಗಾಚಾರ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಜನವರಿ 1986

| | | |
|---|---|---|
| 6. | ಸೋಮವಾರ | ಆಂಡಾಳ್ ನೀರಾಟ್ಟೋತ್ಸವ ಪ್ರಾರಂಭ |
| 8. | ಬುಧವಾರ | ತೊಂಡರಡಿಪ್ಪೊಡಿಯಾಳ್ವಾರ್ ವರ್ಷ ತಿರುನಕ್ಷತ್ರ |
| 13. | ಸೋಮವಾರ | ಭೋಗಿ ಹಬ್ಬ |
| 14. | ಮಂಗಳವಾರ | ಮಕರಸಂಕ್ರಮಣ |
| 15. | ಬುಧವಾರ | ಕನೂಹಬ್ಬ, ಗೋದಾಪರಿಣಯೋತ್ಸವ |
| 25. | ಶನಿವಾರ | ಶ್ರೀರಾಮಕೃಷ್ಣತೀರ್ಥ ಮುಕ್ಕೋಟಿ, ಸಿಂಧೂನದೀ ಪುಷ್ಕರ |
| 28. | ಮಂಗಳವಾರ | ತಿರುಮಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ |
| 31. | ಶುಕ್ರವಾರ | ಕೂರತ್ತಾಳ್ವಾರ್ ವರ್ಷತಿರುನಕ್ಷತ್ರ. |

ನ್ನಾಥದಾಸ ಉತ್ಸವ ಸೇವಾಸಮಿತಿಯವರು ತಿ. ತಿ. ದೇ. ದಾಸಸಾಹಿತ್ಯಪ್ರಾಜೆಕ್ಟ್ ಸಹಕಾರದಲ್ಲಿ ಇದೇ ಅಕ್ಟೋಬರ್ 28, 29, 30 ರಂದು ಮೂರುದಿನಗಳ ಕಾಲ ಯಶಸ್ವಿಯಾಗಿ ಗುರುಜಗನ್ನಾಥ ದಾಸರ ಆರಾಧನಾ ಮಹೋತ್ಸವವನ್ನು ನಡೆಸಿದರು.

ದಿನಾಂಕ 28 ರಂದು ಸಂಜೆ ಎಂ. ಎಲ್. ಎ. ಶ್ರೀ ರಾಯಚೋಟಿ ರಾಮಯ್ಯನವರು ಗುರುಜಗನ್ನಾಥದಾಸರ ಚಿತ್ರವನ್ನು ಅವಿಷ್ಕರಿಸಿ ದೀಪ ಹಚ್ಚುವುದರ ಮೂಲಕ ಉದ್ಘಾಟಿಸಿದ ಆರಾಧನಾ ಉತ್ಸವದಲ್ಲಿ ಕೆ. ಅಪ್ಪಣ್ಣಾಚಾರ್ಯರು ಗುರುಜಗನ್ನಾಥದಾಸರ ಬಗ್ಗೆ ಉಪನ್ಯಾಸ ಮಾಡಿದರು. ಮೂರುದಿನವೂ ಬೆಳಗ್ಗೆ ಸಂಜೆಗಳಲ್ಲಿ ವಿಶೇಷ ಉಪನ್ಯಾಸ ಭಜನೆ, ಸಂಗೀತ, ನೃತ್ಯಗಳು ಏರ್ಪಾಡಾಗಿದ್ದವು. ಭಾಷಣಕಾರರಲ್ಲಿ ಮುಖ್ಯರೆಂದರೆ ಶ್ರೀ ಪಂಡರೀನಾಥಾಚಾರ್ಯ ಗಲಗಲಿ, (ರಾಮಾಯಣದ ವಿವಿಧಪಾತ್ರಗಳು) ಶ್ರೀ ಮುರಳೀಧರಾಚಾರ್ಯ ಗಲಗಲಿ, (ಸುಳಾದಿಗಳು) ಶ್ರೀಜಯತೀರ್ಥಚಾರ್ಯ ಮಳಗಿ (ಈಶಾವಾಸ್ಯ) ಶ್ರೀ ವೆಂಕಟನರಸಿಂಹಾಚಾರ್ಯ. (ರುಕ್ಮಿಣೀಶ ವಿಜಯ) ಶ್ರೀಶಿವಮೊಗ್ಗ ಶ್ರೀನಿವಾಸದಾಸರು ಸುಧಾಮ, ಪ್ರಹ್ಲಾದರ ಬಗ್ಗೆ ಹರಿಕಥೆಯನ್ನೂ ಶ್ರೀ ಮುರುಗೋಡುದಾಸರು ಭಜನೆಯನ್ನೂ ಮಾಡಿದರು.

29 ರಂದು ಪ್ರಾತಃಕಾಲ ರಥೋತ್ಸವ ಯಶಸ್ವಿಯಾಗಿ ಅತಿಹೆಚ್ಚು ಜನಸಂದಣಿಯಿಂದ ನಡೆಯಿತು. ಅಂದು ಸಂಜೆ ಕರ್ನೂಲು ಜಿಲ್ಲಾಧಿಕಾರಿ ಶ್ರೀ ಜಿ. ಸತನಾರಾಯಣ ಅವರು ತಿ. ತಿ. ದೇ. ಪ್ರಕಟನೆಯಾದ 'ಶ್ರೀಗುರುಜಗನ್ನಾಥದಾಸರ ಕೃತಿಗಳು' ಪುಸ್ತಕವನ್ನು ಬಿಡುಗಡೆ ಮಾಡಿದರು.

30 ರಂದು ಪ್ರಾತಃಕಾಲ ಗ್ರಾಮಪ್ರದಕ್ಷಿಣೆಯಲ್ಲಿ ಅಸಂಖ್ಯ ಜನ ಭಾಗವಹಿಸಿದ್ದರು. ಅಂದು ಸಂಜೆ ಶ್ರೀ ವರದೇಶವಿಠಲರ ಚಿತ್ರವನ್ನು ಜಿಲ್ಲಾ ಪರಿಷತ್ ಅಧ್ಯಕ್ಷ ಶ್ರೀ ವಸಂತಗುಪ್ತ ಅವರು ಅನಾವರಣಗೊಳಿಸಿದರು. ಶ್ರೀ ಗುರುಜಗನ್ನಾಥ ದಾಸ ಉತ್ಸವ ಸೇವಾಸಮಿತಿಯವರನ್ನೂ ತಿ. ತಿ. ದೇ. ಪರವಾಗಿ ಸನ್ಮಾನಿಸಲಾಯಿತು.

ದಾಸಸಾಹಿತ್ಯ ಪ್ರಾಜೆಕ್ಟ್‌ನ ಸಲಹಾಸಮಿತಿ ಸದಸ್ಯರು ಸರ್ವಶ್ರೀ ಆದ್ಯರಾಮಾಚಾರ್ಯ, ಅರಳುಮಲ್ಲಿಗೆ ಪಾರ್ಥಸಾರಥಿ, ವಸಂತಕುಮಾರ ಪರಿಗಿ ಅವರುಗಳು ಭಾಗವಹಿಸಿದ್ದರು. ಗುರುಜಗನ್ನಾಥದಾಸ ಸೇವಾಸಮಿತಿಯ ಅಧ್ಯಕ್ಷ ಶ್ರೀ ಕೆ. ಮಾರುತಿ ಮೋಹನ್ ಅವರು ತಮ್ಮ ಸೂಕ್ತ ಮಾರ್ಗದರ್ಶನ ನೀಡಿ ಉತ್ಸವವನ್ನು ಯಶಸ್ವಿಗೊಳಿಸಲು ನೆರವಾದ ತಿ.ತಿ.ದೇ. ಗಳನ್ನು ವಂದಿಸಿದರು.

Edited and Published on behalf of the T. T. Devasthanams by E. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.